**ಅರ್ಪಣೆ:**

ಕೆರೆಯ ನೀರನ್ನು ಕೆರೆಗೆ ಚೆಲ್ಲುವಂತೆ, ನನ್ನ ಎಲ್ಲಾ ಚೀನಿ ಮಿತ್ರ ವೃಂದಕ್ಕೆ

**ಕೃತಜ್ಞತೆ**

ಮಾಹಿತಿ ಸಂಗ್ರಹದಲ್ಲಿ ಪಾಲ್ಗೊಂಡು ತಮ್ಮ ಅತ್ಯಮೂಲ್ಯ ವೈಯಕ್ತಿಕ ಅನಿಸಿಕೆಗಳನ್ನು ಹಂಚಿಕೊಂಡ ಎಲ್ಲಾ ಚೀನಿ ಮಿತ್ರರಿಗೂ ಹಾಗೂ ಅಂತರ್ಜಾಲದಲ್ಲಿ ವಿಷಯ, ಅನಿಸಿಕೆ ಮತ್ತು ಅಂಕಿ ಅಂಶಗಳನ್ನು ಹರಿಯಬಿಟ್ಟ ಎಲ್ಲಾ ಸಂಸ್ಥೆಗಳಿಗೂ ಹಾಗೂ ಸಹೃದಯರಿಗೆ ಈ ಮೂಲಕ ನಾನು ಕೃತಜ್ಞನಾಗಿದ್ದೇನೆ.

ಎಸ್. ಮೋಹನ್

**ಓದುವ ಮುನ್ನಾ...**

ಈ ಪುಸ್ತಕದಲ್ಲಿ ನಿವೇದಿಸಿರುವ ವಿಚಾರ ಲಹರಿಗಳು ಚೀನಾ ದೇಶದ ಬಗ್ಗೆ ಸಹೃದಯ ಓದುಗರಿಗೆ ಇರುವ ಕುತೂಹಲವನ್ನು ಕಿಂಚಿತ್ ತಣಿಸುವ ನಿಟ್ಟಿನಲ್ಲಿ ಒಂದು ಪಕ್ಷಿ ನೋಟವನ್ನು ತೆರೆದಿಡುವ ಸಣ್ಣ ಪ್ರಯತ್ನವಷ್ಟೆ. ಹಂಸಕ್ಷೀರ ನ್ಯಾಯದಂತೆ, ಬರವಣಿಗೆಯಲ್ಲಿ ಉಲ್ಲೇಖಿಸಿರುವ ಕಾಲ, ಅಂಕಿ-ಅಂಶ ಮತ್ತು ಅನಿಸಿಕೆಗಳು ನಾನು ಚೀನಿ ಮಿತ್ರರರೊಂದಿಗೆ ಒಡನಾಡುತ್ತಿದ್ದಾಗ ನಡೆಯುತ್ತಿದ್ದ ಸಂವಾದದ ಸಂದರ್ಭಗಳಲ್ಲಿ ಆ ಕ್ಷಣಕ್ಕೆ ಅವರ ಮನಸ್ಸಿಗೆ ಹೊಳೆದವುಗಳಷ್ಟೇ ಅಲ್ಲದೆ ಅಂತರ್ಜಾಲದಲ್ಲಿ ಲಭಿಸಿದ ಮಾಹಿತಿಗಳನ್ನು ನಾನು ಗ್ರಹಿಸಿದ ಮೇರೆಗೆ ದಾಖಲಿಸಿದ್ದು, ಓದುಗ ಮಹಾಶಯರು ಅವುಗಳೆಲ್ಲವನ್ನು ವಾಸ್ತವಿಕತೆಯ ಚೌಕಟ್ಟಿನಲ್ಲಿಟ್ಟು ಒರೆ ಹಚ್ಚದೆ ಕೇವಲ ವಿಚಾರ ವಿನಿಮಯದ ಹಿನ್ನೆಲೆಯಿಂದ ಕೂಡಿರುವ ಸದುದ್ದೇಶದ ಫಲ ಎಂದು ಭಾವಿಸುವರೆಂಬ ಅಚಲ ನಂಬಿಕೆಯೊಂದಿಗೆ ಪ್ರಸ್ತುತ ಪಡಿಸುತ್ತಿದ್ದೇನೆ.

ಎಸ್. ಮೋಹನ್

**ಪರಿವಿಡಿ:**

| | |
|---|---|
| ಜಗದ ಉಗಮ | ಅನಾದಿ ಕಾಲ |
| ಇತಿಹಾಸ | ಸಂಸ್ಕೃತಿ |
| ನಂಬಿಕೆಗಳು | ಪ್ರಮುಖ ಹಾಗೂ ಪ್ರತ್ಯೇಕತೆ |
| ಚಹ | ಶಿಕ್ಷಣ |
| ಹಬ್ಬ | ವಿವಾಹ |
| ವಿವಾಹ ವಿಚ್ಛೇದನ | ಹೆಣ್ಣಿನ ಸ್ಥಾನಮಾನ |
| ಚಾಪ್‌ಸ್ಟಿಕ್ಸ್ | ಆಸ್ತಿ |
| ಏಕ ಸಂತಾನ ಕಾಯಿದೆ | ವೇಶ್ಯಾವಾಟಿಕೆ |
| ಕಸೂತಿ ಕಲೆ | ಪ್ರವಾಸೋದ್ಯಮ |
| ವೃದ್ಧಾಪ್ಯ ಜೀವನ | ಸಾಂಪ್ರದಾಯಿಕ ವೈದ್ಯಕೀಯ ಪದ್ಧತಿ |
| ಪ್ರಸ್ತುತ | |

**ಜಗದ ಉಗಮ...**

ಚೀನಿಯರ ನಂಬಿಕೆಯಂತೆ ಆರಂಭದಲ್ಲಿ ಏನೂ ಇರಲಿಲ್ಲ, ಗಾಢವಾದ ಕತ್ತಲೆಯೊಂದನ್ನು ಹೊರತು ಪಡಿಸಿ!

ದಂತಕತೆಯ ನಾಯಕನಾದ ಪಂಗೂ ಎಂಬುವನು, ಸುಮಾರು ಹದಿನೆಂಟು ಸಾವಿರ ವರ್ಷಗಳ ಅವಧಿಯ ಸುದೀರ್ಘ ನಿದ್ದೆಯ ತರುವಾಯ ಎಚ್ಚರಗೊಂಡು ಕಡುಗತ್ತಲನ್ನು ಕಂಡು ಬೇಸರಗೊಂಡು ಅದನ್ನು ಬದಲಾಯಿಸಲು ಮನಸ್ಸು ಮಾಡಿ ತನ್ನ ಮಣಭಾರದ ಹರಿತವಾದ ಖಡ್ಗದಿಂದ ಕತ್ತಲನ್ನು ಭೇದಿಸಿದಾಗ, ಹಗುರ ಹಾಗೂ ಭಾರದ ವಸ್ತುಗಳಾಗಿ ಕತ್ತಲು ವಿಭಜನೆಗೊಂಡು ಲಘುವಾಗಿದ್ದ ವಸ್ತುವು ಮೇಲಕ್ಕೇರಿ ಆಗಸವಾಗಿಯು ಮತ್ತು ಭಾರವಾಗಿದ್ದ ವಸ್ತುವು ಕುಸಿದು ಭೂಮಿಯಾಗಿಯೂ ಮಾರ್ಪಟ್ಟಿತು. ಇವೆರಡರ ನಡುವೆ ನಿಂತ ಪಂಗೂ, ಹದಿನೆಂಟು ಸಾವಿರ ವರ್ಷಗಳು ದಿನದಿಂದ ದಿನಕ್ಕೆ ಎತ್ತರಕ್ಕೆ ಬೆಳೆದುದ್ದರ ಪರಿಣಾಮ ಆಗಸ ಹಾಗೂ ಭೂಮಿಯ ನಡುವಿನ ಅಂತರ ಹೆಚ್ಚಾದುದಲ್ಲದೇ ಆಗಸವು ವಿಶಾಲವಾಗಿಯೂ ಮತ್ತು ಭೂಮಿಯು ಬೃಹದಾಕಾರವಾಗಿಯೂ ವೃದ್ಧಿಸಲು ಸಮರ್ಥವಾಯಿತು! ತದನಂತರ, ತನ್ನ ಕಾರ್ಯ ಮುಗಿಯಿತು ಎಂದೆನಿಸಿ ಪಂಗೂ ಮತ್ತೆ ನಿದ್ರೆಗೆ ಜಾರಿದ ಪರಿಣಾಮವೆಂದರೆ, ಆತನ ಉಸಿರಾಟದಿಂದ ಗಾಳಿ ಮತ್ತು ಮೋಡಗಳು ಉದ್ಭವಿಸಿದರೆ, ಗೊರಕೆಯಿಂದ ಶಬ್ಧವು ಅಸ್ಥಿತ್ವಕ್ಕೆ ಬಂತು. ಎಡಗಣ್ಣೇ ಸೂರ್ಯನಾಗಿ, ಬಲಗಣ್ಣು ಚಂದ್ರನಾಗಿ ಆತನ ತಲೆಗೂದಲುಗಳು ನಕ್ಷತ್ರಗಳಾಗಿ ಪರಿವರ್ತನೆಗೊಂಡವು. ಆತನ ಧಮನಿಯಲ್ಲಿ ಹರಿಯುತ್ತಿದ್ದ ರಕ್ತವು ನದಿ ಕೆರೆಗಳಾದುದ್ದಲ್ಲದೇ ಮಾಂಸಖಂಡಗಳು ಫಲವತ್ತಾದ ಭೂಮಿಯಾಗಿ ಮಾರ್ಪಟ್ಟಿತು. ಮೈಯಲ್ಲಿನ ಮೂಳೆಗಳೆಲ್ಲಾ ಖನಿಜಗಳಾಗಿ, ಬೆವರೆಲ್ಲಾ ಮಳೆಯಾದವು. ಕಟ್ಟ ಕಡೆಗೆ ಮೈಯಲ್ಲಿನ ರೋಮಗಳೆಲ್ಲಾ ಕಾಡುಮೇಡಾಗಿ ಬದಲಾವಣೆಗೊಂಡು ಸಂಪೂರ್ಣವಾದ ಈ ಜಗದ ಉದ್ಭವ ಕ್ರಿಯೆ ಅಂತ್ಯಗೊಂಡಿತು!

ಧುತ್ತೆಂದು ಪ್ರತ್ಯಕ್ಷವಾದ "ನುವಾ" ಎಂಬ ದೇವತೆ ಮಾನವ ಕುಲದ ಉಗಮಕ್ಕೆ ಕಾರಣಕರ್ತೆ! ಪ್ರಾರಂಭದಲ್ಲಿ, ಅತೀ ಸಾವಕಾಶವಾಗಿ ಹಳದೀ ಮಣ್ಣಿನಿಂದ ಪ್ರತಿಯೊಬ್ಬ ಮಾನವನ ಆಕೃತಿಗಳನ್ನು ತಯಾರಿಸುತ್ತಿದ್ದ ಆಕೆಗೆ ಉತ್ಪಾದನೆಯ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬೇಕೆಂಬ ಆಶಯದೊಂದಿಗೆ ಒಂದು ಹಗ್ಗವನ್ನು ಹಳದೀ ಮಣ್ಣಿನ ರಾಡಿಗೆ ಅದ್ದಿ ಮೇಲೆ ತೆಗೆದು ಬೆರಳಿನಿಂದ ಮೀಟಿದಾಗ ಮಣ್ಣಿನ ರಾಡಿಯ ಬಿಂದುಗಳು ಭೂಮಿಯ ಮೇಲೆಲ್ಲಾ ಹರಡಿ ಒಂದೊಂದು ಹನಿಯೂ ಮಾನವರೂಪಿಗಳಾಗಿ ಬದಲಾದವಂತೆ.
ಮುಂದೆ, ನೀರಿನ ದೇವತೆಯಾದ "ಗಾಂಗ್‌ಗಾಂಗ್" ಮತ್ತು ಬೆಂಕಿಯ ದೇವತೆಯಾದ "ಝೂರಾಂಗ್" ಎಂಬಿಬ್ಬರ ನಡುವೆ ಯಾವುದೋ ಕಾರಣಕ್ಕೆ ಭಾರೀ ಕಲಹ ಉಂಟಾಗಿ, ನೀರಿನ ದೇವತೆಯು ಸೋಲನ್ನನುಭವಿಸಿ, ಅವಮಾನ ತಾಳಲಾರದೇ ಭೂಮಿಗೂ ಆಗಸಕ್ಕೂ ನಡುವಿನ ಅಂತರವನ್ನು ಕಾಯ್ದುಕೊಳ್ಳಲು ಇದ್ದ ಬೂಝೌ ಎಂಬ ಪರ್ವತಕ್ಕೆ ಡಿಕ್ಕಿ ಹೊಡೆದ ಪರಿಣಾಮವಾಗಿ ಪರ್ವತವು ಪುಡಿಪುಡಿಯಾಗಿ ಆಗಸವು ಕುಸಿಯಲು ಆರಂಭಿಸಿತು. ಈ ಕ್ಲಿಷ್ಟ ಸಂದರ್ಭದಲ್ಲಿ ಭೂಮಿಯ ಮೇಲಿನ ಜನಸಂಕುಲ ಕಷ್ಟಕಾರ್ಪಣ್ಯಕ್ಕೆ ಸಿಲುಕಿದಾಗ, "ನುವಾ" ದೇವತೆಯು ತನ್ನ ಮಕ್ಕಳಾದ ಮಾನವ ಸಂಕುಲವನ್ನು ರಕ್ಷಿಸಲು ತಿಯನ್‌ತಾಯ್ ಎಂಬ ಪರ್ವತದಿಂದ ಬಣ್ಣಬಣ್ಣದ ಬಂಡೆ ಕಲ್ಲುಗಳನ್ನು ಹೆಕ್ಕಿ ತೂತು ಬಿದ್ದ ಆಗಸಕ್ಕೆ ಅಂಟಿಸಿ ಆಗುತ್ತಿದ್ದ ಅನಾಹುತವನ್ನು ತಪ್ಪಿಸಿ ಮಾನವ ಕುಲಕ್ಕೆ ಶಾಂತಿ ಹಾಗೂ ಸಂತೋಷವು ಮರುಕಳಿಸಲು ಕಾರಣಕರ್ತಳಾದಳಂತೆ!

**ಅನಾದಿ ಕಾಲ:**

ನಂಬಿಕೆಯಂತೆ, ಕ್ರಿ.ಪೂ. ಹತ್ತುಸಾವಿರ ವರ್ಷಗಳ ಹಿಂದೆ ಈ ಪ್ರಾಂತ್ಯದಲ್ಲಿ ಜೀವಿಸಿದ್ದ ಜನರು ಮುಖ್ಯವಾಗಿ ಬೇಟೆ ಹಾಗೂ ಸೊಪ್ಪು ಮತ್ತು ಹಣ್ಣುಗಳನ್ನು ಆಹಾರವನ್ನಾಗಿಸಿಕೊಂಡಿದ್ದರು. ನಂತರ ಕ್ರಿ.ಪೂ. ಐದು ಸಾವಿರ ವರ್ಷಗಳ ಹಿಂದೆ ಬೇಸಾಯದೊಂದಿಗೆ ಹಂದಿ ಮತ್ತು ನಾಯಿಯ ಸಾಕಾಣಿಕೆಯನ್ನು ಕಲಿತರು. ಈ ಅವಧಿಯಲ್ಲಿ ಕುಂಬಾರಿಕೆ ಕೂಡ ಆರಂಭವಾಯಿತು. ಕ್ರಿ.ಪೂ. ಮೂರು ಸಾವಿರ ವರ್ಷಗಳ ಹಿಂದೆ ಕೋಳಿ, ಕುರಿ, ಆಡು ಮತ್ತು ದನಗಳನ್ನು ಸಾಕಲು ಕಲಿತರು. ಕ್ರಿ.ಪೂ. ಎರಡು ಸಾವಿರದ ಮುನ್ನೂರು ವರ್ಷಗಳ ಹಿಂದೆ ಕುದುರೆಯನ್ನು ಸವಾರಿ ಮಾಡುವಂತಾಯಿತು. ಜೊತೆಗೆ ಬಟ್ಟೆ, ಬಿದಿರಿನ ಬುಟ್ಟಿ ಮತ್ತು ಚಕ್ರವನ್ನು ಬಳಸಲು ಕಲಿತರು. ನಂತರ ಅತೀತ ಶಕ್ತಿಯನ್ನು ಸಂತೈಸಲು "ಜೇಡ್" ನಿಂದ ಕೆಲವು ವಸ್ತುಗಳನ್ನು ತಯಾರಿಸಿ ಸಮರ್ಪಿಸಲು ಆರಂಭಿಸಿದರು. ಕ್ರಿ.ಪೂ. ಎರಡು ಸಾವಿರ ವರ್ಷದ ಹೊತ್ತಿಗೆ, ಹಿತ್ತಾಳೆಯ ಅವಿಷ್ಕಾರವಾಯಿತು. ಮುಂದೆ ಸಣ್ಣ ಗುಂಪುಗಳಲ್ಲಿದ್ದ ಜನರು ಒಬ್ಬರ ಮೇಲೆ ಮತ್ತೊಬ್ಬರು ಬಿದ್ದು ಹೊಡೆದಾಟ ನಡೆಸಿ ಇದ್ದುದ್ದನ್ನೆಲ್ಲಾ ಕಿತ್ತು ಜೀವನ ಮಾಡುವ ಶೈಲಿ ಆರಂಭವಾಯಿತು. ಅಷ್ಟೊತ್ತಿಗೆ, ಅತೀತ ಶಕ್ತಿಗೆ ನರಬಲಿಯನ್ನು ಕೊಡುವ ಸಂಪ್ರದಾಯ ಕೂಡ ನಡೆದು ಬಂದಿತು.

**ಇತಿಹಾಸ:**

ಚೀನಾ ಎಂದರೆ ಅವರ ಭಾಷೆಯಲ್ಲಿ "ಮಧ್ಯದ ಸಾಮ್ರಾಜ್ಯ" ಎಂದರ್ಥ.

ಕ್ರಿ. ಪೂ ೧೬೦೦ ರ ಅವಧಿಯಲ್ಲಿ, ಆಗತಾನೆ ಪ್ರಬಲ ಗುಂಪೆನಿಸಿಕೊಂಡ ಶಾಂಗ್ ಎಂಬ ರಾಜಮನೆತನದವರಿಂದ ಪೂರ್ವೀಕರನ್ನು, ತಮ್ಮ ಮರಣಾ ನಂತರ ಅವರೆಲ್ಲರ ಮುಂದಿನ ಪ್ರಯಾಣಕ್ಕೆ ಅನುಕುಲವಾಗುತ್ತದೆ ಎಂಬ ನಂಬಿಕೆಯೊಂದಿಗೆ ಅನೇಕ ವಸ್ತುಗಳೊಡನೆ ಪೂಜಿಸುವ ಪದ್ಧತಿಯಲ್ಲದೇ "ಡೀ" ಎಂಬ ಹೆಸರಿನ ದೇವತೆಯನ್ನು ಆರಾಧಿಸುವ ಕಾರ್ಯ ಆರಂಭವಾಯಿತು. ಮುಂದುವರೆದಂತೆ, ಶಾಂಗ್ ಆಳ್ವಿಕೆಯಲ್ಲಿ ನಗರದ ಕಲ್ಪನೆ ಸಾಕಾರವಾಗಿ, ತಮ್ಮ ರಾಜಧಾನಿಯನ್ನಾಗಿ ಝೆಂಗ್ ದೌ ಪ್ರದೇಶವನ್ನು ಆಯ್ಕೆ ಮಾಡಿಕೊಂಡರು. ಅಲ್ಲಿಯವರೆಗೂ ಮರದ ಹಾಗೂ ಕಲ್ಲಿನ ಪರಿಕರಗಳನ್ನು ಉಪಯೋಗಿಸುತ್ತಾ ಇದ್ದವರು ಹಿತ್ತಾಳೆಯ ಪಾತ್ರೆಗಳನ್ನು ಬಳಸುವಂತಾಯಿತು. ಉಣ್ಣೆ ಮತ್ತು ಹತ್ತಿಯ ಬಟ್ಟೆಯೊಂದಿಗೆ ರೇಷ್ಮೆಯ ಬಟ್ಟೆಯನ್ನು ಉಪಯೋಗಿಸಲಾರಂಭಿಸಿದರು. ರಾಜಧಾನಿಯಲ್ಲಿ, ಯುದ್ಧದಲ್ಲಿ ಸೋತು ಸೆರೆ ಸಿಕ್ಕ ಸೈನಿಕರೆಲ್ಲರನ್ನು ಗುಲಾಮರಂತೆ ಬಳಸಿಕೊಂಡು ಕೋಟೆ, ಅರಮನೆ ಹಾಗೂ ದೇವಸ್ಥಾನಗಳ ಸ್ಥಾಪನೆ ಮಾಡಲಾಯಿತು. ಮುಂದೆ ರಾಜನು ಮರಣ ಹೊಂದಿದರೆ, ಅವನೊಂದಿಗೆ ಅಂಗರಕ್ಷಕರು, ಸೇವಕರು ಮತ್ತು ಗುಲಾಮರನ್ನು ಸಹ ಕೊಲ್ಲುವ ಪದ್ದತಿ ಬೆಳೆಯತೊಡಗಿತು. ಕ್ರಿ.ಪೂ. ಸಾವಿರದ ಇನ್ನೂರರ ಹೊತ್ತಿಗೆ, ಕುದುರೆಗಳನ್ನು ಅಳವಡಿಸಿದ ರಥಗಳ ಬಳಕೆ ಪ್ರಚಲಿತಕ್ಕೆ ಬಂತು.

ಶಾಂಗ್ ರಾಜಮನೆತನವನ್ನು ನಿರ್ನಾಮ ಮಾಡಿ ಝೌ ಎಂಬ ರಾಜಮನೆತನವು ಅಧಿಕಾರಕ್ಕೆ ಬಂದು ಕ್ರಿ.ಪೂ. ೧೦೨೨ ರಿಂದ ಕ್ರಿ.ಪೂ. ೨೨೦ ರವರೆಗೆ ಸುಮಾರು ೮೦೦ ವರ್ಷಗಳ ಕಾಲ ರಾಜ್ಯಭಾರ ಮಾಡಿದರು. ಕ್ರಿ.ಪೂ. ೬೫೦ ರಿಂದ ಕ್ರಿ. ಪೂ ೪೦೦ ರ ಅವಧಿಯಲ್ಲಿ ನಾಣ್ಯಗಳ ಚಲಾವಣೆ ಆದುದಲ್ಲದೇ ಕಬ್ಬಿಣದ ಅವಿಷ್ಕಾರವಾಗಿ ಆಯುಧ, ಬೇಸಾಯ ಮತ್ತು ಇತರ ಉಪಕರಣಗಳಲ್ಲಿ ಬಳಕೆಯಾಗತೊಡಗಿತು. ಮುಂದುವರೆದು ಬೇಸಾಯಕ್ಕೆ ನೀರಾವರಿ ಕಾಲುವೆಗಳು ನಿರ್ಮಾಣವಾಯಿತಲ್ಲದೇ ಗಾಳಿಪಟ, ಛತ್ರಿ, ಸೂಜಿ ಚಿಕಿತ್ಸೆ ಮತ್ತು ಚಹವನ್ನು ಕೂಡ ಈ ಅವಧಿಯಲ್ಲಿ ಕಂಡುಹಿಡಿಯಲಾಯಿತು. ಪಶ್ಚಿಮದ "ಕನ್‌ಫ್ಯೂಡಿಯಸ್" ಎನಿಸಿಕೊಂಡ ಕಾಂಗ್-ಫೂಜೀ ತನ್ನ ಪ್ರವಚನ ಮತ್ತು ಸಿದ್ಧಾಂತಗಳಿಂದ ಜನರನ್ನು ಆಕರ್ಷಿತಗೊಳಿಸಲು ಸೋತನು. ಅದೇ ಅವಧಿಯಲ್ಲಿ "ತಾವೋ" ಪಂಥವನ್ನು ಕೆಲವರು ಆಸಕ್ತಿಯಿಂದ ಪಾಲಿಸತೊಡಗಿದರು. ಚೀನಿಯರ ನಂಬಿಕೆಯಂತೆ ಪಂಚಭೂತಗಳೆಂದರೆ ಮರ, ಬೆಂಕಿ, ಭೂಮಿ, ಲೋಹ ಮತ್ತು ನೀರು.

ಝೌ ಆಡಳಿತದಲ್ಲಿದ್ದ ಅಧಿಕಾರಿಗಳ ಒಳಜಗಳದ ಅನುಕೂಲತೆಯನ್ನು ಪಡೆದ ಚಿನ್ ರಾಜಮನೆತನದ ರಾಜನಾದ ಚಿನ್ ಷುವಾಂಗ್ ದೀ ಎಂಬುವನು ಅಲ್ಲಿಯವೆರೆಗೂ ಇದ್ದ ಎಲ್ಲಾ ರಾಜರುಗಳನ್ನು ಒತ್ತಡಕ್ಕೆ ಒಳಪಡಿಸಿ, ತನ್ನನ್ನು ಇಡೀ ಸಾಮ್ರಾಜ್ಯಕ್ಕೆ ಚಕ್ರವರ್ತಿ ಎಂದು ಘೋಷಿಸಿಕೊಂಡನು. ಅವನ ಕಾಲದಲ್ಲಿ ದೇಶದುದ್ದಕ್ಕೂ ತೂಕ ಮತ್ತು ಅಳತೆಯ ಏಕತಾನದ ಮಾಪನವನ್ನು ಜಾರಿಗೊಳಿಸಿದನು. ಅಲ್ಲಿಯವರೆಗು ಇದ್ದ ಇತರ ಲಿಪಿಗಳ ಬಿದಿರಿನ ಹಾಗೂ ರೇಷ್ಮೆಯ ಎಲ್ಲಾ ಪುಸ್ತಕಗಳನ್ನು ಸುಟ್ಟು ಅವನು ನಿರ್ಧರಿಸಿದ ಲಿಪಿಯಲ್ಲೇ ಪುಸ್ತಕಗಳನ್ನು ಬರೆಯಲು ಆದೇಶಿಸಿದನು. ಇಡೀ ಸಾಮ್ರಾಜ್ಯವನ್ನು ೩೪ ಭಾಗಗಳಾಗಿ ವಿಂಗಡಿಸಿ ಅವುಗಳಿಗೆ ಪ್ರತ್ಯೇಕ ಗವರ್ನರ್ ಹಾಗೂ ಸೈನ್ಯಾಧಿಕಾರಿಯನ್ನು ನೇಮಿಸಿ ಅವರಿಂದ ನಿಯತ ಕಾಲಕ್ಕೆ ವರದಿ ಬರುವಂತೆ ಮಾಡಿಕೊಂಡು ತನ್ನ ಆಡಳಿತವನ್ನು ಸುಗಮಗೊಳಿಸಿಕೊಂಡನು. ಬಂಡಾಯವೆದ್ದ ಯಾರೇ ಆಗಿರಲಿ ಅವರನ್ನು ಅಧಿಕಾರದಿಂದ ಕೆಳಗಿಳಿಸಿ ಮಹಾಗೋಡೆಯ ನಿರ್ಮಾಣದ ಜಾಗಗಳಿಗೆ ಕೂಲಿಯಂತೆ ದುಡಿಯಲು ಆದೇಶಿಸುತ್ತಿದ್ದನು.

ಅವನ ಕಾಲದಲ್ಲಿ ನೀರಾವರಿಗೆ, ರಸ್ತೆ ನಿರ್ಮಾಣಕ್ಕೆ ಮತ್ತು ಮಹಾಗೋಡೆಯನ್ನು ಅಭಿವೃದ್ಧಿಗೊಳಿಸುವ ಕಾರ್ಯಗಳಿಗೆ ಸಾಮಾನ್ಯ ಜನರನ್ನು ಬಲವಂತವಾಗಿ ದುಡಿಯುವಂತೆ ಮಾಡಲಾಗುತ್ತಿತ್ತು. ಈತ ಮರಣಿಸಿದಾಗ ಸುಮಾರು ೭೦೦೦ ಟೆರ್ರಾಕೋಟಾ ಸೈನಿಕರೊಂದಿಗೆ ಸಮಾಧಿ ಮಾಡಲಾಯಿತು. ಆತನ ಸಮಾಧಿಯು ಮುಂದೆ ೧೯೭೪ರಲ್ಲಿ ನಡೆದ ಉತ್ಖನನದಲ್ಲಿ ಪ್ರಪಂಚಕ್ಕೆ ಗೋಚರವಾಯಿತು.

ತದನಂತರ, ಹನ್ ಎಂಬ ರಾಜಮನೆತನ ಉಚ್ಛ್ರಾಯ ಸ್ಥಿತಿಗೇರಿತು. ಇವರ ಕಾಲಾವಧಿಯಲ್ಲಿ ನೀರಿನ ಗಿರಣಿ ಮತ್ತು ಸರಪಳಿ ಪಂಪ್‌ಗಳ ಅವಿಷ್ಕಾರವಾಯಿತು. ಕನ್‌ಫ್ಯೂಷಿಯಸ್‌ನ ಸಿದ್ಧಾಂತಗಳನ್ನು ಹೆಚ್ಚು ಮಾನ್ಯ ಮಾಡಿದ ಈ ಮನೆತನ ನಾಗರೀಕರೇನಾದರು ಆಸ್ಥಾನದಲ್ಲಿ ಪದವಿ ಗಳಿಸಬೇಕಾದರೆ, ಕನ್‌ಫ್ಯೂಷಿಯಸ್‌ನ ಸಿದ್ಧಾಂತದ ಆಧಾರಿತ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕಾಗಿತ್ತು. ಈ ಪದ್ಧತಿಯನ್ನು ಇಂದಿಗೂ ಪಬ್ಲಿಕ್ ಸಿವಿಲ್ ಸರ್ವಿಸ್ ಪರೀಕ್ಷೆಗೆ ಬಳಸಲಾಗುತ್ತಿದೆ.

ಕ್ರಿ.ಶ.೨೨೦ರ ಹೊತ್ತಿಗೆ ಹನ್ ರಾಜವಂಶದ ಆಳ್ವಿಕೆ ಕ್ರಮೇಣ ನಶಿಸಿ, ಸಮಗ್ರ ಸಾಮ್ರಾಜ್ಯ ಮೂರು ಭಾಗಗಳಾಗಿ ವಿಂಗಡಣೆಗೊಂಡು, ಉತ್ತರದಲ್ಲಿ ವೇಯ್ ರಾಜಮನೆತನ, ಪಶ್ಚಿಮದಲ್ಲಿ ಷು ರಾಜಮನೆತನ ಮತ್ತು ದಕ್ಷಿಣದಲ್ಲಿ ವೂ ರಾಜಮನೆತನಗಳ ವಶವಾಯಿತು. ಒಳಜಗಳಗಳು ಮೂರು ದೇಶಗಳಲ್ಲಿನ ಜನರ ಶಾಂತಿಯನ್ನು ಕದಡಿಸಿತ್ತು. ನಾಲ್ಕನೇ ಶತಮಾನದಲ್ಲಿ ತೊರ್ಬಾ, ಎಂಬ ತುರುಕರ ಧಾಳಿ ಉತ್ತರದಲ್ಲಿ ಆರಂಭವಾಗಿ ಜಯದಲ್ಲಿ ಅಂತ್ಯಗೊಂಡಿತು. ತೊರ್ಬಾಗಳು ಬಲು ಬೇಗ ಚೀನಿಯರ ಸಂಸ್ಕೃತಿಯೊಂದಿಗೆ ಬೆರೆತು ಅವರಲ್ಲಿ ಒಂದಾದರು. ಮುಂದೆ ಏನಂಥಾ ಪ್ರಮುಖ ಘಟನೆಗಳಿಲ್ಲದೆ ಅನೇಕ ಸಣ್ಣ ಪುಟ್ಟ ರಾಜಮಹಾರಾಜರ ಆಳ್ವಿಕೆ ನಡೆಯುತ್ತಿತ್ತು.

ಆರನೇ ಶತಮಾನದಲ್ಲಿ ತಾಂಗ್ ರಾಜಮನೆತನವು ಪ್ರಬಲವಾಗಿ, ದೇಶಾದ್ಯಂತ ಎಲ್ಲಾ ರಾಜರನ್ನು ತನ್ನ ಅಧಿಕಾರಕ್ಕೆ ಒಳಪಡಿಸಿಕೊಂಡು ಯಶಸ್ವಿಯಾಗಿ ಆಡಳಿತ ನಡೆಸುತ್ತಾ ದೇಶದಲ್ಲಿ ಸುಭಿಕ್ಷೆ ನೆಲೆಸುವಂತಾಯಿತು. ಈ ಅವಧಿಯಲ್ಲಿ ಮುದ್ರಣ ಕಲೆ, ಗನ್‌ಪೌಡರ್‌ನ ಅವಿಷ್ಕಾರವಾಯಿತು. ಹೊರ ದೇಶಗಳೊಡನೆ ವ್ಯಾಪಾರ ವಹಿವಾಟು ಉನ್ನತ ಸ್ಥಾನ ತಲುಪಿತು. ಇವರ ಕಾಲದಲ್ಲಿ ಕಲೆಗೆ ಸಾಕಷ್ಟು ಪ್ರೋತ್ಸಾಹ ನೀಡಲಾಗುತ್ತಿತ್ತು. ಅಷ್ಟೊತ್ತಿಗೆ ಬೌದ್ಧ ಧರ್ಮ ಪ್ರವರ್ಧಮಾನದಲ್ಲಿದ್ದು ಬೌದ್ಧ ಸನ್ಯಾಸಿಗಳು ಎಲ್ಲಾ ತರಹದ ತೆರಿಗೆಯಿಂದ ಮುಕ್ತರಾಗಿದ್ದರು. ಅದೇ ವೇಳೆಗೆ ನಾಣ್ಯಗಳ ಮುದ್ರಣಕ್ಕೆ ತಾಮ್ರದ ಕೊರತೆಯುಂಟಾಗಿ, ಕಾರಣ ಹುಡುಕುತ್ತಾ ಅರಿವಾಗಿದ್ದು ಬೌದ್ಧರು ತಮ್ಮ ಎಲ್ಲಾ ದೇವಸ್ಥಾನಗಳ ಚಾವಣಿ, ವಿಗ್ರಹಗಳು ಮತ್ತು ಘಂಟೆಗಳಿಗೆ ತಾಮ್ರವನ್ನು ಬಳಸುತ್ತಿದ್ದದ್ದು! ಕೂಡಲೇ ಅವರ ಎಲ್ಲಾ ದೇವಸ್ಥಾನಗಳನ್ನು ವಶಪಡಿಸಿಕೊಂಡು ನಲವತ್ತರ ಕೆಳಗಿನ ವಯೋಮಾನದ ಎಲ್ಲಾ ಬೌದ್ಧ ಭಿಕ್ಷುಗಳನ್ನು ಅಲ್ಲಿಂದ ಎತ್ತಂಗಡಿ ಮಾಡಿಸಿ ಸಾಮಾನ್ಯ ಜೀವನ ನಡೆಸುವಂತೆ ಆದೇಶಿಸಲಾಯಿತು. ತಾಂಗ್ ಆಳ್ವಿಕೆಯಲ್ಲಿನ ವಿಶೇಷವೆಂದರೆ ಇಡೀ ಚೀನಾದ ಚರಿತ್ರೆಯಲ್ಲಿ ಮಹಾರಾಣಿಯಾದ ವೂ ಜ಼ತಿಯನ್ ಎಂಬ ಒಬ್ಬಳೇ ಮಹಿಳೆ ಸುಮಾರು ನಲವತ್ತು ವರ್ಷಗಳ ಕಾಲ ರಾಜ್ಯಭಾರ ಮಾಡಿದ್ದು. ಎಂಟನೆ ಶತಮಾನದಲ್ಲಿ ಅರಬ್ಬರ ಧಾಳಿಯಿಂದ ತಾಂಗ್ ಆಳ್ವಿಕೆಯು ತನ್ನ ಹಿಡಿತವನ್ನು ಕ್ರಮೇಣ ಕಳೆದುಕೊಳ್ಳತೊಡಗಿತು. ಪರಿಣಾಮವಾಗಿ, ಇಡೀ ಸಾಮ್ರಾಜ್ಯ ಮತ್ತೆ ಛಿದ್ರವಾಯಿತು.

ಒಂಭತ್ತನೇ ಶತಮಾದದಲ್ಲಿ ಸಾಂಗ್ ರಾಜಮನೆತನವು ಮತ್ತೆ ಇಡೀ ಸಾಮ್ರಾಜ್ಯವನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಯಿತು. ವಿಯೆಟ್ನಾಮ್‌ನಿಂದ ಆಮದಾದ ಶೀಘ್ರ ಇಳುವರಿಯ ಪ್ರಬೇಧವಾದ ಭತ್ತ ಮತ್ತು ನೀರಾವರಿಗೆ ನೀಡಿದ್ದ ಉತ್ತೇಜನದಿಂದ ದೇಶದಲ್ಲಿ ಸುಭಿಕ್ಷೆ ಪ್ರಾಪ್ತಿಯಾಯಿತು. ಜೊತೆಗೆ ಗಮನಾರ್ಹ ಜನಸಂಖ್ಯೆಯ ವೃದ್ಧಿಯಾಯಿತು. ಕಾಗದ, ರೇಷ್ಮೆ, ಅಂಟು, ಸಿರಾಮಿಕ್ ಮತ್ತು ಕಬ್ಬಿಣದ ಕೈಗಾರಿಕೆಗಳು ಉನ್ನತ ಮಟ್ಟದಲ್ಲಿ ಅಭಿವೃದ್ಧಿಯಾಗತೊಡಗಿತು. ಸಾಗರಯಾನದಲ್ಲಿ ದಿಕ್ಸೂಚಿಯ ಬಳಕೆ ಆರಂಭವಾಯಿತು. ಆಮದಾದ ಧರ್ಮಗಳನ್ನೆಲ್ಲಾ ಕಡೆಗಣಿಸಿ "ಕನ್‌ಫ್ಯೂಷಿಯಸ್"ನ ಸಿದ್ಧಾಂತವನ್ನು ಎಲ್ಲರ ಮೇಲೂ ಹೇರಲಾಯಿತು. ಜೊತೆಗೆ ವಿದ್ಯಾಭ್ಯಾಸಕ್ಕೆ ಒತ್ತು ಕೊಟ್ಟು ಅಸಂಖ್ಯಾತ ಶಾಲೆಗಳನ್ನು ಆರಂಭಿಸಿ "ಕನ್‌ಫ್ಯೂಷಿಯಸ್"ನ ಸಿದ್ಧಾಂತವನ್ನು ಬೋಧಿಸಲಾಗುತ್ತಿತ್ತು.

ಹದಿಮೂರನೇ ಶತಮಾನದ ಆದಿಯಲ್ಲಿ, ಜೆಂಘೀಸ್ ಖಾನ್ ನೇತೃತ್ವದಲ್ಲಿ ಆರಂಭವಾದ ಮಂಗೋಲರ ಧಾಳಿ ಉತ್ತರ ಚೀನಾವನ್ನು ವಶಪಡಿಸಿಕೊಂಡು ಸಂಪೂರ್ಣ ಬೀಜಿಂಗ್ ಅನ್ನು ಸುಟ್ಟು ಭಸ್ಮಗೊಳಿಸಲು ಶಕ್ತವಾಯಿತು. ಆದರೂ ದಕ್ಷಿಣದಲ್ಲಿದ್ದ ಸಾಂಗ್ ರಾಜವಂಶದ ರಾಜರನ್ನು ತನ್ನ ವಶಕ್ಕೆ ಪಡೆಯಲು ಹತ್ತು ವರ್ಷಗಳು ಮೀರಿದವು. ಇದರೊಂದಿಗೆ, ಸಂಪೂರ್ಣ ಚೀನಾದ ರಾಜರುಗಳೆಲ್ಲರು ಮಂಗೋಲರ ವಶವಾಗಿ ದೇಶಾದ್ಯಂತ ಸಮಾಜವನ್ನು ನಾಲ್ಕು ಪಂಗಡವಾಗಿಸಿತು. ಪ್ರಥಮ ದರ್ಜೆಯಲ್ಲಿ ಮಂಗೋಲರು ಎರಡನೆಯದಾಗಿ ಪರದೇಶದವರು, ಉತ್ತರ ಭಾಗದ ಚೀನಿಯರನ್ನು ಮೂರನೇ ಸ್ಥಾನದಲ್ಲಿರಿಸಿ ದಕ್ಷಿಣ ಭಾಗದ ಚೀನಿಯರನ್ನು ಕಡೆಗಣಿಸಲಾಯಿತು. ಈ ಪಂಕ್ತಿ ಭೇದದಿಂದ ಹದಿಮೂರನೇ ಶತಮಾನದ ಅಂತ್ಯದಲ್ಲಿ ಸಮಾಜದಲ್ಲಿ ಅರಾಜಕತೆಯು ಭುಗಿಲೆದ್ದು ದೇಶದಲ್ಲೆಲ್ಲಾ ಹಾಹಾಕಾರವಾಗಲು ಅಲ್ಲಿಯವರೆಗೆ "ಯುಆನ್" ಅಂದರೆ "ಮಹಾ ಅನ್ವೇಷಕ" ಎಂದು ಸ್ವಯಂ ಘೋಷಿಸಿಕೊಂಡಿದ್ದ ಕುಬ್ಲೈ ಖಾನ್ ಎಂಬುವನ ಅಸಮರ್ಥಕವಾದ ಆಳ್ವಿಕೆಯನ್ನು ಕೊನೆಗಾಣಿಸಿ "ಮಿಂಗ್" ರಾಜಮನೆತನದವರು ಆತನನ್ನು ಮಂಗೋಲಕ್ಕೆ ಓಡುವಂತೆ ಮಾಡಿ ದೇಶದ ಅಧಿಕಾರವನ್ನು ತಮ್ಮ ವಶಕ್ಕೆ ತೆಗೆದುಕೊಂಡರು.

"ಮಿಂಗ್" ರಾಜಮನೆತನದ ಆಳ್ವಿಕೆಯಲ್ಲಿ ತಮ್ಮ ರಾಜಧಾನಿಯನ್ನು ಬೀಜಿಂಗ್ ಹಾಗೂ ನ್ಯಾನ್‌ಜಿಂಗ್ ನಡುವೆ ಆಗಾಗ್ಗೆ ಬದಲಾಯಿಸುತ್ತಿದ್ದರು. ಈ ಬದಲಾವಣೆಯ ಅವಧಿಯಲ್ಲಿ ಬೀಜಿಂಗ್‌ನಲ್ಲಿ ಉತ್ಕೃಷ್ಟವಾದ ಅರಮನೆಗಳನ್ನು ರಾಜವಂಶಸ್ಥರಿಗೂ ಅದರ ಸುತ್ತಲೂ ಅಧಿಕಾರಿಗಳಿಗೆಂದು ರಾಜನಗರಿಯನ್ನೂ ಮತ್ತು ಅವುಗಳನ್ನು ಸುತ್ತುವರಿದು ಸಾಮಾನ್ಯ ಪ್ರಜೆಗಳಿಗೆಂದು ನಗರದ ನಿರ್ಮಾಣವಾಯಿತು. ಇವರ ಆಳ್ವಿಕೆಯ ಕಾಲದಲ್ಲಿ ಅಮೇರಿಕಾದಿಂದ ಹೊಸ ಬೆಳೆಗಳಾದ ಗೆಣಸು, ಮುಸುಕಿನ ಜೋಳ ಮತ್ತು ನೆಲಗಡಲೆ ಆಮದಾಗಿ ವ್ಯವಸಾಯದಲ್ಲಿ ಪ್ರಗತಿಯಾಯಿತು. ಚೀನಾದ ಮಹಾಗೋಡೆಯ ಅಭಿವೃದ್ಧಿ ಕಾರ್ಯವೂ ಮುಂದುವರೆಯಿತು. ಹತ್ತಿ ಹಾಗೂ ಪಿಂಗಾಣಿ ಕೈಗಾರಿಕೆ ಉಚ್ಛ್ರಾಯ ಸ್ಥಿತಿ ತಲುಪಿ ಹೊರದೇಶಗಳೊಂದಿಗಿನ ವ್ಯಾಪಾರ ವೃದ್ಧಿಸತೊಡಗಿತು. ಮಂಗೋಲರ ಆಳ್ವಿಕೆಯಲ್ಲಿ ಚೀನಾದಲ್ಲಿ ನೆಲೆಸಿದ್ದ ಪರದೇಶದವರಿಗಿದ್ದ ಮನ್ನಣೆಯಲ್ಲಿ ಗಮನಾರ್ಹ ಕಡಿತವನ್ನು "ಮಿಂಗ್" ರಾಜಮನೆತನದವರು ಜಾರಿಗೊಳಿಸಿದರು. ಹದಿನೈದನೇ ಶತಮಾನದ ಮಧ್ಯದಲ್ಲಿ ಪೋರ್ಚುಗೀಸರ ಆಗಮನವಾಗಿ, ಅವರನ್ನು ಮಕಾವ್ ಎಂಬಲ್ಲಿ ತಂಗಲು ಆದೇಶಿಸಲಾಯಿತು.

ಹದಿನಾರನೇ ಶತಮಾನದ ಮಧ್ಯದಲ್ಲಿ ದೇಶಾದ್ಯಂತ ಭೀಕರ ಕ್ಷಾಮ ತಲೆದೋರಿ ಪ್ಲೇಗು, ಸಿಡುಬು ಮುಂತಾದ ರೋಗರುಜಿನಗಳು ತಾಂಡವವಾಡುತ್ತಿದ್ದುದ್ದಲ್ಲದೇ ಆಡಳಿತದಲ್ಲಿ ಅರಾಜಕತೆ ಉಂಟಾದ ಸಮಯದಲ್ಲಿ ದೇಶದ ಹೊರಗೆ ಈಶಾನ್ಯ ದಿಕ್ಕಿನಲ್ಲಿ ನೆಲೆಸಿದ್ದ "ಮಂಚೂ" ಅಥವ "ಚೆಂಗ್" ಎಂಬ ಜನಾಂಗವು ಚೀನಾದ ಮೇಲೆ ಧಾಳಿಯಿಡುತ್ತಾ ಕ್ರಮೇಣ ಹದಿನಾರನೆ ಶತಮಾನದ ಅಂತ್ಯದಲ್ಲಿ ಸಂಪೂರ್ಣ ವಶಪಡಿಸಿಕೊಳ್ಳಲು ಸಮರ್ಥವಾಯಿತು. ಜೊತೆಗೆ ೧೬೮೩ರಲ್ಲಿ ತೈವಾನ್, ೧೬೯೭ರಲ್ಲಿ ಮಂಗೋಲಿಯ ಮತ್ತು ೧೭೨೦ರಲ್ಲಿ ಟಿಬೇಟನ್ನು ತಮ್ಮದಾಗಿಸಿಕೊಂಡರು. ನಂತರ, ಇವರ ಆಳ್ವಿಕೆಯಲ್ಲಿ ಗಂಡಸರೆಲ್ಲರೂ ತಮ್ಮ ತಲೆಯ ಮುಂಭಾಗದ ಕೂದಲನ್ನು ತೆಗೆಯಲು ಆದೇಶಿಸಲಾಯಿತು. ಕಬ್ಬಿಣ, ಹತ್ತಿ ಮತ್ತು ಪಿಂಗಾಣಿ ಉದ್ಯಮ ಮತ್ತೆ ಚಿಗುರಿ ಉನ್ನತ ಮಟ್ಟವೇರಿ ಯೂರೋಪ್ ದೇಶಗಳಿಗೆ ರವಾನೆಯಾಗಿತ್ತಿತ್ತು. ವೃದ್ಧಿಸಿದ ಚಹದ ಇಳುವರಿಯನ್ನು ಬ್ರಿಟನ್‌ಗೆ ರಫ್ತು ಮಾಡಿ ಬೆಳ್ಳಿಯನ್ನು ಪಡೆಯಲಾಗುತ್ತಿತ್ತು. ಚೀನಾದೊಳಗೆ ವ್ಯಾಪಾರ ಮಾಡಲು ಯೂರೋಪಿನವರಿಂದ ಇದ್ದ ಮಹತ್ವದ ಬೇಡಿಕೆಯನ್ನು ನಿರಾಕರಿಸಿ ಅವರ ವ್ಯವಹಾರವನ್ನು ಗುವಾಂಗ್ ಝೂ ಬಂದರಿಗಷ್ಟೇ ಸೀಮಿತಗೊಳಿಸಲಾಗಿತ್ತು. ಆದರೂ ತಾಂತ್ರಿಕತೆಯ ದೃಷ್ಟಿಯಲ್ಲಿ ಮಂಚೂಣಿಯಲ್ಲಿದ್ದ ಯೂರೋಪಿನವರ ಮುಂದೆ ತಮ್ಮ ಪರಿಸ್ಥಿತಿಯು ಭವಿಷ್ಯದಲ್ಲಿ ಏನಾಗುವುದೋ ಎಂದು ರಾಜಮನೆತನಕ್ಕೆ ಕಳವಳ ಆರಂಭವಾಯಿತು. ಹದಿನೆಂಟನೇ ಶತಮಾನದ ಹೊತ್ತಿಗೆ ಬ್ರಿಟೀಷರು ಚಹಕ್ಕೆ ಬದಲಾಗಿ ನೀಡುತ್ತಿದ್ದ ಇತರೆ ವಸ್ತುಗಳೊಂದಿಗೆ ಬೆಳ್ಳಿಯನ್ನು ನೀಡಲು ಶಕ್ತರಾಗದೆ "ಓಪಿಯಮ್" ಅನ್ನು ಸರಬರಾಜು ಮಾಡತೊಡಗಿದರು! ತಮ್ಮ ಗಮನಕ್ಕೆ ಬಂದ ರಾಜಮನೆತನದವರು "ಓಪಿಯಮ್"ನ ಆಮದು ಮತ್ತು ಬಳಕೆಯನ್ನು ದೇಶಾದ್ಯಂತ ನಿಷೇಧಿಸಿದರೂ ಕಳ್ಳಮಾರ್ಗದಲ್ಲಿ ಚಹಕ್ಕೆ ಬದಲಾಗಿ ಓಪಿಯಮ್ ಅನ್ನು ಬದಲಾಯಿಸಿಕೊಳ್ಳುವ ಪ್ರಕ್ರಿಯೆ ಸಾಂಗವಾಗಿ ನಡೆಯುತ್ತಿತ್ತು. ಇದನ್ನು ತಡೆಗಟ್ಟುವ ನಿಟ್ಟಿನಲ್ಲಿ ೧೮೩೯ ರಲ್ಲಿ ಆರಂಭವಾಗಿ ೧೮೬೦ರವರೆಗೆ ನಡೆದ ಬ್ರಿಟೀಷರು ಹಾಗೂ ಚೀನಾದ ನಡುವಿನ ಓಪಿಯಮ್ ಕದನವು ಚೀನಾವನ್ನು ಶಕ್ತಿಹೀನರನ್ನಾಗಿ ಮಾಡಿತಲ್ಲದೇ ಯೂರೋಪಿಯನ್ನರು ದೇಶದೊಳಕ್ಕೆ ನುಗ್ಗಲು ಅವಕಾಶವಾದಂತಾಯಿತು.

ಹತ್ತೊಂಭತ್ತನೇ ಶತಮಾನದಂಚಿಗೆ ತಲುಪುವಷ್ಟರಲ್ಲಿ ಜಪಾನ್ ಮತ್ತು ಕೊರಿಯಾ ದೇಶಗಳೊಡನೆ ಯುದ್ಧಗಳಾಗಿ ಚೀನಾವು ಸಾಕಷ್ಟು ದಣಿದಿತ್ತು. ಆ ಅವಧಿಯಲ್ಲೇ ಚೀನಾದ ವರ್ತಕರೊಡನೆ ಯೂರೋಪಿನ ಜಂಟೀ ಕಾರ್ಯಾಚರಣೆಯಿಂದ ಚೀನಾದಲ್ಲಿ ಕಲ್ಲಿದ್ದಲ ಗಣಿ, ಕಬ್ಬಿಣ, ಹತ್ತಿ, ಉಗಿ ಬಂಡಿಯ ಕಾರ್ಖಾನೆಗಳನ್ನು ಸ್ಥಾಪಿಸಲಾಯಿತು. ಕೆಲವೆಡೆ ಸಣ್ಣ ರೈಲುಮಾರ್ಗವನ್ನು ತರೆಯಲಾಯಿತು. ಮುಂದೆ "ತಂತಿ" ಅಥವಾ "ಟೆಲಿಗ್ರಾಫ್" ಸೇವೆಯ ಬಳಕೆ ಆರಂಭಿಸಲಾಯಿತು. ಮಹತ್ತರವಾದ ಬದಲಾವಣೆಗಳಾಗಿತ್ತಿದ್ದ ಈ ಸಮಯದಲ್ಲಿ "ಕನ್‌ಫ್ಯೂಷಿಯಸ್"ನ ಸಿದ್ಧಾಂತದ ಸಾಂಪ್ರದಾಯಿಕ ಅನುಯಾಯಿಗಳ ಪ್ರತಿಭಟನೆ ಆರಂಭವಾಯಿತು!

ಇಪ್ಪತ್ತನೆ ಶತಮಾನದ ಆರಂಭದಲ್ಲಿ ದೇಶದಲ್ಲಿನ ಕೆಲವು ಚಿಂತಕರು ಮತ್ತು ನಾಯಕತ್ವದ ಗುಣವಿದ್ದ ಮಾನವ ಕುಲಕ್ಕೆ, ಪುರಾತನ ಕಾಲದಿಂದ ಇಲ್ಲಿಯವರೆಗೆ ಅನುಸರಿಸಿಕೊಂಡು ಬಂದಿದ್ದ ರಾಜಕೀಯ ಮತ್ತು ಸಾಮಾಜಿಕ ಶೈಲಿಗೆ ಬೇಸತ್ತು ಇದನ್ನು ಸಂಪೂರ್ಣವಾಗಿ ಗೂಡಿಸಿದರೆ ಮಾತ್ರ ಮುಂದಿನ ಭವಿಷ್ಯ ಭವ್ಯ ಎಂಬ ನಂಬಿಕೆಯಿಂದ ಅನೇಕ ಸಾಹಸಗಳನ್ನು ಕಾಲದುದ್ದಕ್ಕೂ ವ್ಯಕ್ತಪಡಿಸುತ್ತಾ ತಮ್ಮ ಪ್ರತಾಪವನ್ನು ಪ್ರದರ್ಶಿಸುತ್ತಾ ಜನಬಲವನ್ನು ಗಳಿಸುತ್ತಾ ಬಂದರು. ಕಾರ್ಲ್ ಮಾರ್ಕ್ಸ್‌ನ ಸಿದ್ಧಾಂತವನ್ನು ಅನುಸರಿಸಿ, ೧೯೨೧ರಲ್ಲಿ (ಸಿ.ಸಿ.ಪಿ.) ಚೀನಾ ಕಮ್ಯೂನಿಸ್ಟ್ ಪಕ್ಷದ ಉದಯವಾಯಿತು.

ಹೀಗೆ ಚೀನಾ ದೇಶದ ಪುರಾತನ ಇತಿಹಾಸವು ಬೃಹದಾಕಾರವಾದುದಲ್ಲದೇ ಹಾಗೂ ಅತೀ ಸಂಕೀರ್ಣ ಚರಿತ್ರೆಯನ್ನೊಳಗೊಂಡಿದ್ದು ಸುಮಾರು ೮೩ ರಾಜಮನೆತನಗಳ ೫೫೯ ರಾಜ, ಮಹಾರಾಜ ಹಾಗೂ ಚಕ್ರವರ್ತಿಗಳ ಆಳ್ವಿಕೆ ಮತ್ತು ನಮ್ಮ ಗಣನೆಗೆ ನಿಲುಕದಷ್ಟು ಮಂದಿಯ ಸಾವು ನೋವನ್ನು ತನ್ನ ಒಡಲೊಳಗೆ ಹುದುಗಿಸಿಕೊಡಿದೆ. ಚಿಂಗ್ ರಾಜಮನೆತನಕ್ಕೆ ಸೇರಿದ ಪೂಯಿ ಎಂಬ ಚಕ್ರವರ್ತಿಯು ನಡೆಸಿದ ೧೯೦೮ ರಿಂದ ೧೯೧೨ ರವರೆಗಿನ ರಾಜ್ಯಭಾರದೊಂದಿಗೆ ಬಹು ದೀರ್ಘ ಕಾಲದ ರಾಜ ಪರಂಪರೆಯ ಆಳ್ವಿಕೆಯು ಅಂತ್ಯ ಕಂಡಿತು.

ಇಸವಿ ೧೯೪೯ ಅಕ್ಟೋಬರ್ ತಿಂಗಳ ೧ನೇ ತಾರೀಖಿನಿಂದ ದೇಶದಲ್ಲಿನ ೫೬ ವಿವಿಧ ಪ್ರಾದೇಶಿಕ ಜನಾಂಗವು ಒಂದುಗೂಡಿ ಚೀನಾದ ಗಣರಾಜ್ಯವಾಗಿ ಮಾರ್ಪಟ್ಟು ಅವಿರೋಧವಾಗಿ ಮಾವ್ ಝೀಡಾಂಗ್ ಎಂಬುವರನ್ನು ದೇಶದ ಅಧ್ಯಕ್ಷ ಎಂದು ಘೋಷಿಸಲಾಯಿತು. ಪ್ರಸ್ತುತ ಈ ದೇಶವು ೨೩ ರಾಜ್ಯಗಳು, ೪ ಕೇಂದ್ರಾಡಳಿತಕ್ಕೊಳಪಟ್ಟ ರಾಜ್ಯಗಳು, ೫ ಸ್ವಾಯತ್ತೆಯ ವಲಯಗಳು ಮತ್ತು ವಿಷೇಶ ಅಡ್ಮಿನಿಸ್ಟ್ರೇಟಿವ್ ರಾಜ್ಯಗಳಾದ ಹಾಂಗ್ ಕಾಂಗ್ ಮತ್ತು ಮಕಾವ್ ಗಳನ್ನು ಹೊಂದಿದೆ. ಸುಮಾರು ೧೩೦ ಕೋಟಿಗೂ ಮಿಕ್ಕ ಜನಸಂಖ್ಯೆಯನ್ನು ಹೊಂದಿದ್ದು ಶೇಕಡಾ ತೊಂಭತ್ತರಷ್ಟು ನಾಗರೀಕರನ್ನು ಹನ್ ವರ್ಗದ ಚೀನಿಯರೆಂದು ಮತ್ತು ಶೇಕಡಾ ಹತ್ತರಷ್ಟು ನಾಗರಿಕರನ್ನು ಇತರರು ಎಂದು ಗುರುತಿಸುತ್ತಾರೆ. ದೇಶದ ಒಟ್ಟಾರೆ ಜನಸಂಖ್ಯೆಯಲ್ಲಿ ೮೨ರಷ್ಟು ಜನರು ಹಳ್ಳಿ ಹಾಗೂ ಗುಡ್ಡಗಾಡಿನಲ್ಲಿ ವಾಸಿಸುವವರು. ಮ್ಯಾಂಡರಿನ್ ರಾಷ್ಟ್ರಭಾಷೆಯಾದರೂ ಕ್ಯಾಂಟೋನೀಸ್, ಹಕ್ಕ, ಮಿನ್ನಾನೆಸ್ ಮತ್ತು ಶಾಂಘೈನೀಸ್ ಎಂಬ ನಾಲ್ಕು ಪ್ರಮುಖ ಭಾಷೆಗಳೊಂದಿಗೆ ಒಂದು ಅಂದಾಜಿನ ಪ್ರಕಾರ ಸುಮಾರು ೧೮೦೦ ಆಡುಭಾಷೆಗಳು ಇನ್ನೂ ದೇಶಾದ್ಯಂತ ಚಲಾವಣೆಯಲ್ಲಿದೆ. ಸ್ವಯಂ ಘೋಷಿತ ನಾಸ್ತಿಕ ದೇಶವಾದರೂ ೩೦ ಕೋಟಿಗೂ ಹೆಚ್ಚಿನ ನಾಗರೀಕರು ಒಂದಲ್ಲಾ ಒಂದು ಧರ್ಮದ ಹಿಂಬಾಲಕರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಬೌದ್ಧ, ತಾವೋ, ಮುಸಲ್ಮಾನ ಮತ್ತು ಕ್ರೈಸ್ತ ಧರ್ಮಗಳು.

**ಸಂಸ್ಕೃತಿ:**

ಮಾನವ ಕುಲವು ಅರಿತಿರುವಂತೆ ಯಾವುದೇ ಸಂಸ್ಕೃತಿ ಎಂದರೆ ಜ್ಞಾನ, ನಂಬಿಕೆ, ಕಲೆ, ನೀತಿ, ಸಂಪ್ರದಾಯ, ಕಾನೂನು, ಹವ್ಯಾಸ ಮತ್ತು ಗ್ರಹಣಶೀಲತ್ವಗಳ ಸಂಕೀರ್ಣವಾದ ಬಂಧನದೊಂದಿಗೆ ಸಮಾಜದಲ್ಲಿ ಜರುಗುವ ಘಟನೆಗಳನ್ನು ಅರ್ಥೈಸಿಕೊಂಡು ಅನುಸರಿಸಿ ಯಾ ತಿದ್ದುಪಡಿಯೊಂದಿಗೆ ಸೂಕ್ತವಾದ ಉತ್ತರವನ್ನು ಕಂಡುಕೊಳ್ಳುತ್ತಾ ಒಬ್ಬರಿಗೊಬ್ಬರು ಗೌರವ ಸೂಚಿಸುತ್ತಾ ಸಾಧ್ಯವಾದಷ್ಟೂ ಸೌಹಾರ್ದಯುತವಾಗಿ ಬದುಕುವಿಕೆ. ಸಂಸ್ಕೃತಿಯ ಮೌಲ್ಯಗಳು ತನ್ನ ವಲಯದಲ್ಲಿರುವ ನಾಗರೀಕರಿಗೆ ನಂಬಿಕೆ, ಗುಣ ಮತ್ತು ನಡವಳಿಕೆಗಳ ಮೇಲೆ ಗಮನಾರ್ಹವಾದ ಪರಿಣಾಮವನ್ನು ಬೀರುವುದರೊಂದಿಗೆ ಸಾಮಾಜಿಕ ಸ್ಥಾನ ಮಾನಗಳ ನಿಖರತೆಯನ್ನು ನಿರ್ಧರಿಸುತ್ತದೆ.

ಸಂಸ್ಕೃತಿಯನ್ನು ಬೃಹದಾಕಾರವಾಗಿ ಐದು ವಿಭಾಗಗಳಾಗಿ ವಿಂಗಡಿಸಿದರೆ; ಅಂತಾರಾಷ್ಟ್ರೀಯ, ರಾಷ್ಟ್ರೀಯ, ಪ್ರಾಂತೀಯ, ವ್ಯಾವಹಾರಿಕಾ ಮತ್ತು ಸಂಸ್ಥೆಯ ಸಂಸ್ಕೃತಿಗಳನ್ನು ಕಾಣಬಹುದು.

ಚೀನಿಯರ ನೆಲೆಯು ಮುಖ್ಯ ಭೂಮಿ, ತೈವಾನ್, ಹಾಂಗ್‌ಕಾಂಗ್ ಹಾಗೂ ವಿದೇಶಗಳಲ್ಲಿ ಚದುರಿದ್ದರೂ, ಅವರೆಲ್ಲರಲ್ಲಿ ಚೀನಿಯತೆಯ ಸಾಂಸ್ಕೃತಿಕ ಗುಣವು ಹಾಸುಹೊಕ್ಕಾಗಿ ಬೆರೆತಿದೆ. ಚೀನಿ ಸಂಸ್ಕೃತಿಯು ಮುಖ್ಯವಾಗಿ ಮೂರು ಸಂಸ್ಕೃತಿಗಳ ಸಂಗಮವಾಗಿದೆ. ಅವುಗಳೆಂದರೆ ಸುಮಾರು ನಾಲ್ಕು ಸಾವಿರ ವರ್ಷಗಳಿಗೂ ಮೀರಿ ಅನುಸರಿಸುತ್ತಾ ಬಂದಿರುವ ತಮ್ಮದೇ ಆದ ಕನ್‌ಫ್ಯೂಷಿಯಸ್, ತಾವೋ ಮತ್ತು ಬೌದ್ಧ ಸಿದ್ಧಾಂತಗಳ ಮಿಶ್ರಣವಾದ ಸಾಂಪ್ರದಾಯಿಕ ಸಂಸ್ಕೃತಿ, ನಂತರದ ಕಮ್ಯೂನಿಸ್ಟ್ ಸಿದ್ಧಾಂತ ಮತ್ತು ಇತ್ತೀಚೆಗೆ ಸೇರ್ಪಡೆಯಾದ ಪಾಶ್ಚ್ಯಾತ್ಯ ಸಂಸ್ಕೃತಿ!

ಕನ್‌ಫ್ಯೂಷಿಯಸ್‌ನ ಸಿದ್ಧಾಂತದ ಅನುಸಾರವಾಗಿ ಸಮಾಜದಲ್ಲಿ ಪುರುಷರಿಗೆ ಪ್ರಥಮ ಆದ್ಯತೆಯನ್ನಿತ್ತು ಅದರ ಸುತ್ತಲೇ ಮಿಕ್ಕೆಲ್ಲಾ ಸಾಮಾಜಿಕ ಹಾಗೂ ರಾಜಕೀಯ ಚಟುವಟಿಕೆಗಳನ್ನು, ಕುಟುಂಬಲ್ಲಿನ ನಡವಳಿಕೆಯಿಂದ ಹಿಡಿದು ಚಕ್ರವರ್ತಿಯ ರಾಜ್ಯಭಾರದವರೆಗೆ ಜೋಡಿಸಿದರ ಪರಿಣಾಮ ಸ್ತ್ರೀಯರ ಸ್ಥಿತಿಯು ಪುರುಷರ ಸೇವೆ ಮಾಡಿ ಅವರನ್ನು ಸಂಪ್ರೀತಿಗೊಳಿಸುವಲ್ಲೇ ತೃಪ್ತರಾಗಬೇಕಾಯಿತು. ಆತನ ನಂಬಿಕೆಯಂತೆ ದೇಶದಲ್ಲಿರುವ ಎಲ್ಲರು ಸಮಾಜದಲ್ಲಿನ ತಮ್ಮ ಸ್ಥಾನ ಮಾನಗಳ ಮಿತಿಯನ್ನು ಅರಿತು ಗೌರವಿಸಿ ಅದರಂತೆ ನಡೆದರೆ ಜನಾಂಗಕ್ಕೂ ಹಾಗೂ ಪ್ರಕೃತಿಗೂ ನ್ಯಾಯ ಸಲ್ಲಿಸಿದಂತಾಗುವುದು.

ಸಂಸ್ಕೃತಿಯು ಸದಾ ಹರಿಯುವ ನೀರಿನಂತೆ ಕಾಲಕ್ಕೆ ತಕ್ಕಂತೆ ದೊರಕುವ ಗುಣಾವಶೇಷಗಳನ್ನು ತನ್ನೊಂದಿಗೆ ಬೆರೆಸಿಕೊಳ್ಳುತ್ತಾ ಸಾಗುತ್ತಿರುವುದರ ಪರಿಣಾಮವಾಗಿ ಪ್ರಸ್ತುತ ಚೀನಿಯರು ದೇಶಾಭಿಮಾನ, ತಮ್ಮ ಸಂಸ್ಕೃತಿಯೇ ಉತ್ಕೃಷ್ಟ, ಕಷ್ಟ ಸಹಿಷ್ಣುತೆ, ಕಾನೂನಿಗಿಂತ ನಾಯಕರೇ ಮಿಗಿಲು, ವ್ಯವಸ್ಥೆಯಲ್ಲಿನ ಅಂತಸ್ತಿನ ನಿಯಮದ ಕಟ್ಟುನಿಟ್ಟಾದ ಪಾಲನೆ ಮತ್ತು ಏನಾದರೂ ಹಣೆಬರಹಕ್ಕೆ ಹೊಣೆ ಯಾರು? ಎನ್ನುವ ಸ್ಥಿತಿಯೊಂದಿಗೆ ಮುಂದುವರೆಯತೊಡಗಿದೆ.

**ನಂಬಿಕೆಗಳು:**

- ೭ - ಶುಭ ಸಂಖ್ಯೆ

- ೮ - ಉಜ್ವಲ ಭವಿಷ್ಯ

- ೪ - ಸಾವಿನ ಉಚ್ಚಾರಣೆ (ವ್ಯಾವಹಾರಿಕ ಸಂದರ್ಭಗಳನ್ನು ಹೊರತುಪಡಿಸಿ, ಸಂಖ್ಯೆ ನಾಲ್ಕು ಬರುವೆಡೆಯಲ್ಲಿ ೩ಅ, ೧೩ಅ ೨೩ಅ ಎಂದು ಬಳಸುತ್ತಾರೆ)

- ಶುಭಾಶಯ ಪತ್ರಗಳನ್ನು ಕೆಂಪು ಶಾಯಿಯಲ್ಲಿ ಬರೆಯಬಾರದು

- ಗಡಿಯಾರದ ಕಾಣಿಕೆ ಸಲ್ಲ, ಕಾರಣ ಅಶುಭ ಹಾಗೂ ಸಾವಿನ ಸಂಕೇತ

- ಕತ್ತರಿ, ಚಾಕುವಿನ ಕಾಣಿಕೆ ಸಂಬಂಧಗಳನ್ನು ಕಡಿತಗೊಳಿಸಿದಂತೆ

- ಆಹಾರದ ಕಾಣಿಕೆ ಸಲ್ಲ, ಕಾರಣ ಪಡೆಯುವವರ ಬಡತನವನ್ನು ಎತ್ತಿ ತೋರಿಸಿದಂತೆ

- ಉಡುಗೊರೆಗೆ ತಕ್ಕ ವಸ್ತುಗಳು: ವೈನ್, ಟೀ, ಸಿಗರೇಟ್ ಮತ್ತು ಹಣ್ಣು

- ಉಡುಗೊರಯ ರಕ್ಷಾಹೊದಿಕೆ: ಕೆಂಪು - ಸಂತೋಷದಾಯಕ ಸಮಾರಂಭಗಳಿಗೆ, ಚಿನ್ನ-ಬೆಳ್ಳಿ - ಮದುವೆಯ ಕಾರ್ಯಕ್ರಮಕ್ಕೆ, ಕಪ್ಪು-ಬಿಳುಪು - ಸಾವಿನ ಕಾರ್ಯಕ್ರಮಗಳಿಗೆ

- ಪ್ರತೀ ಏಳು ವರ್ಷಕ್ಕೊಮ್ಮೆ ಮಾನವನ ಜೀವನದಲ್ಲಿ ಬದಲಾವಣೆಯಾಗುವುದರಿಂದ, ವಿಷೇಶವಾಗಿ ದಂಪತಿಗಳು ಆ ಸಮಯದ ಆಸುಪಾಸಿನಲ್ಲಿ ಜಾಗರೂಕತೆಯಿಂದ ನಡೆದುಕೊಳ್ಳಲು ಪ್ರಯತ್ನಿಸುವರು

**ಮರೆಯಬಾರದ ಹತ್ತು ಪ್ರಮುಖ ಹಾಗೂ ಪ್ರತ್ಯೇಕ ಸಂಗತಿಗಳು ಚೀನಾದ ಬಗ್ಗೆ:**

೧. ಗುವಾನ್ಸಿ: ನಿಮಗಿರುವ ಪ್ರಭಾವಿತ ವ್ಯಕ್ತಿಯ ಪರಿಚಯ - ಸಾಮಾನ್ಯವಾಗಿ ವ್ಯೆವಹಾರಗಳಲ್ಲಿನ ವಿಜಯಕ್ಕೆ ಅಡಿಪಾಯ

೨. ಮಿಯಾನ್ಜಿ: ಯಾವುದೇ ಸ್ಥಳವಿರಲಿ, ಹಿರಿಯರನ್ನು (ವಯಸ್ಸು ಅಥವ ಪದವಿ) ಗುರುತಿಸಿ ನೀಡಲೇಬೇಕಾದ ಮರ್ಯಾದೆಯ ಆದ್ಯತೆ

೩. ಹೋಂಗ್‌ಬಾವ್: ಉಡುಗೊರೆ ಕೊಡಲು ಬಳಸುವ ಕೆಂಪು ಲಕೋಟೆ (ಸಾಮಾನ್ಯವಾಗಿ ಹಣ)

೪. ಗಾಂಬೆಯ್: ಮದ್ಯಪಾನದ ವೇಳೆಯಲ್ಲಿ ಲೋಟದಲ್ಲಿರುವ ಪಾನೀಯವನ್ನು ಸಂಪೂರ್ಣ ಕುಡಿದು ಬರಿದುಮಾಡಲು ಮನವಿ

-ಪೇಯದ ಲೋಟವನ್ನು "ಟೋಸ್ಟ್" ಮಾಡಲು ಎಲ್ಲರೂ ಕಡ್ಡಾಯವಾಗಿ ಭಾಗವಹಿಸಲೇಬೇಕು

-ಪಾನೀಯ ವಿತರಣೆಯಲ್ಲಿ ಎಂದಿಗೂ ಹಿರಿಯರಿಗೆ ಮೊದಲ ಆದ್ಯತೆ

-ಗಾಂಬೆಯ್ ಎಂದಾಗ ಲೋಟದಲ್ಲಿರುವ ಪಾನೀಯವನ್ನು ಸಂಪೂರ್ಣ ಕುಡಿದು ಬರಿದುಮಾಡಿ ಲೋಟದಲ್ಲಿ ಏನೂ ಉಳಿದಿಲ್ಲದಿರುವುದನ್ನು ಎಲ್ಲರಿಗೂ ತೋರಿಸಬೇಕು, ಇಲ್ಲದಿದ್ದರೆ ಎದುರಿನಲ್ಲಿರುವವರಿಗೆ ಅವಮಾನ ಮಾಡಿದಂತೆ.

೫. ಮಾವ್‌ತಾಯ್: ಗೋಧಿ ಮತ್ತು ಸೊರ್ಘಮ್ ಎಂಬ ಕಾಳಿನಿಂದ ತಯಾರಿಸಲ್ಪಟ್ಟ ಅತೀ ತೀಕ್ಷ್ಣವಾದ ಮದ್ಯ.

-ಚೀನಾದಲ್ಲಿರುವಾಗ, ಅವರೊಂದಿಗೆ ಎಂದಿಗೂ ಕುಡಿಯುವ ವೇಳೆಯಲ್ಲಿ ಪ್ರೈಪೋಟಿಗೆ ಇಳಿಯಬಾರದು, ಕಾರಣ ಅವರುಗಳು ಮಹಾನ್ ಕುಡುಕರು! ತಪ್ಪಿಸಿಕೊಳ್ಳಲು ಇರುವ ಒಂದೇ ಮಾರ್ಗ, ನೀವು ಮದ್ಯಪಾನಿಗಳಲ್ಲ ಎಂದು ಘಂಟಾಘೋಷವಾಗಿ ವಿಷದಪಡಿಸುವುದು.

೬. ಪುಟಾಂಗ್‌ಹುವಾ: ಮ್ಯಾಂಡರಿನ್ ಭಾಷೆ

೭. ತೀಫ಼ಾನ್ ವಾನ್: ಕಬ್ಬಿಣದ ಅನ್ನದ ಬಟ್ಟಲು, ಉದ್ಯೋಗದ ಭದ್ರತೆ (ಪ್ರಸ್ತುತ ಪರಿಸ್ಥಿತಿ ಬದಲಾಗಿದೆ)

೮. ಝೌ ಹೋವ್ ಮನ್: ಪಾಗಾರ ಹಾರುವುದು, ಅಡ್ಡದಾರಿ ಹಿಡಿಯುವುದು (ಕಾರ್ಯವಾಸೀ)

೯. ದಾನ್ ವೈ: ಅಧಿಕೃತ ಕಛೇರಿಯ ವಿಳಾಸ

೧೦. ಮಾವೋ: ಮರೆತಾದರೂ ಗತಿಸಿದ ರಾಷ್ಟ್ರಾಧ್ಯಕ್ಷ ಮಾವೋ ಬಗ್ಗೆ ಚಕಾರವೆತ್ತಬಾರದು.

**ಚಹ:**

ಚೀನಾದ ಚರಿತ್ರೆ ಹಾಗೂ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆರೆತು ಜೀವಿಸಲು ಅವಶ್ಯವಿರುವ ಏಳು ವಸ್ತುಗಳಲ್ಲಿ ತನ್ನ ಸ್ಥಾನವನ್ನು ಭದ್ರಗೊಳಿಸಿಕೊಂಡಿರುವುದರಲ್ಲಿ ಚಹವೂ ಒಂದು. ಅಂದಹಾಗೇ, ಜೀವಿಸಲು ಇನ್ನಿತರ ಆರು ಅತ್ಯವಶ್ಯವಾದ ವಸ್ತುಗಳೆಂದರೆ; ಬೆಂಕಿ, ಅಕ್ಕಿ, ಎಣ್ಣೆ, ಉಪ್ಪು, ಸೋಯಾ ದ್ರಾವಣ ಮತ್ತು ವಿನೆಗರ್!



ಕ್ರಿ.ಪೂ. ೨೭೩೭ ರಲ್ಲಿ ಝೌ ಎನ್ನುವ ರಾಜವಂಶಕ್ಕೆ ಸೇರಿದ ಶೆನ್‌ನಾಂಗ್ ಎಂಬ ಮಹಾರಾಜನಿಂದ ಅವಿಷ್ಕಾರಗೊಂಡು ಮುಂದೆ ಝೌಗಾಂಗ್ ಎಂಬುವನಿಂದ ಜನಜನಿತವಾಯಿತು ಎಂದು ಪ್ರತೀತಿ. ಒಮ್ಮೆ ಶೆನ್‌ನಾಂಗ್ ತನ್ನ ರಾಜಪರಿವಾರದೊಂದಿಗೆ ವಿಹಾರಾರ್ಥ ಎಲ್ಲಿಗೋ ಹೊರಟಿದ್ದಾಗ ದಣಿವಾರಿಸಿಕೊಳ್ಳಲು ಕಾಡಿನ ಮಧ್ಯದಲ್ಲಿ ಬಿಡಾರ ಹೂಡಬೇಕಾಯಿತು. ಆತನ ಆಳ್ವಿಕೆಯಲ್ಲಿ ಜಾರಿಯಲ್ಲಿದ್ದ, ಆರೋಗ್ಯದ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ಮಾಡಿದ್ದ ಆದೇಶದಂತೆ, ಯಾವಾಗಲೂ ಕುಡಿಯುವ ನೀರನ್ನು ಚೆನ್ನಾಗಿ ಕಾಯಿಸಿ ಆರಿಸಿ ಕುಡಿಯಬೇಕಾಗಿದುದ್ದರಿಂದ ರಾಜಪರಿವಾರದ ಜೊತೆಗಿದ್ದ ಅಡುಗೆಯವರು ಅಡುಗೆಯ ಸಿದ್ಧತೆಯೊಡನೆ ಕುಡಿಯುವ ನೀರಿನ ಸಲುವಾಗಿ ಹತ್ತಿರದ ತೊರೆಯಲ್ಲಿನ ನೀರನ್ನು ದೊಡ್ಡದಾದ ಪಾತ್ರೆಯಲ್ಲಿ ಕಾಯಿಸುತ್ತಿದ್ದಾಗ ಗಾಳಿಗೆ ತೂರಿ ಬಂದ ಯಾವುದೋ ಒಣಗಿದ ಎಲೆಗಳು ಪಾತ್ರೆಯಲ್ಲಿ ಬಿದ್ದು ಕುದಿಯುತ್ತಿದ್ದ ನೀರಿನ ಬಣ್ಣವನ್ನು ಕಂದು ಬಣ್ಣಕ್ಕೆ ಬದಲಾಯಿಸಿತು. ಏನು ಮಾಡಬೇಕೆಂದು ತಿಳಿಯದೇ ಚಡಪಡಿಸುತ್ತಿದ್ದ ಅಡುಗೆಯವರನ್ನು ಕಂಡು ರಾಜನು ವಿಚಾರಿಸಿ ವಿಷಯ ಅರಿತು, ಬಿಸಿನೀರಿನ ಪಾತ್ರೆಯಿಂದ ಬರುತ್ತಿದ್ದ ವಿಶೇಷವಾದ ವಾಸನೆಗೆ ಆಕರ್ಷಿತನಾಗಿ ಕುತೂಹಲದಿಂದ ಸ್ವತಃ ವೈದ್ಯನೂ ಹಾಗೂ ವಿಜ್ಞಾನಿಯಾದ ಆತನು ನೀರಿನ ರುಚಿಯನ್ನು ಸವಿದಾಗ ಮನಸ್ಸಿಗೆ ಏನೋ ಒಂದು ತರಹದ ಪ್ರಫುಲ್ಲತೆ ಉಂಟಾಯಿತು! ಹೀಗೇ ಆರಂಭವಾದ ಆಕಸ್ಮಿಕ ಘಟನೆಯಿಂದ ಇಂದು ಚಹವು ಈ ದೇಶದ ರಾಷ್ಟ್ರೀಯ ಪೇಯವಾಗಿ ಪರಿವರ್ತನೆಗೊಂಡಿದೆ.

ಆರಂಭದಲ್ಲಿ ದೇವತೆಗಳ ಮತ್ತು ಪೂರ್ವಿಕರ ಆರಾಧನೆಗೆ ನಂತರ ಔಷಧಿ ಹಾಗೂ ಆಹಾರವಾಗಿ ಮಾತ್ರವೇ ಬಳಕೆಯಾಗುತ್ತಿದ್ದ ಚಹವು ಮುಂದೆ ಆರನೇ ಶತಮಾನದಲ್ಲಿ ತಾಂಗ್ ಮತ್ತು ಸಾಂಗ್ ರಾಜಮನೆತನದ ಆಳ್ವಿಕೆಯ ಕಾಲದಲ್ಲಿ ರಾಜಮನೆತನದವರಿಂದ ಹಿಡಿದು ಜನಸಾಮಾನ್ಯರು ಕೂಡ ಸಾಮಾನ್ಯ ಪೇಯವಾಗಿ ಬಳಸುವಂತಾಯಿತು. ಚಹ ಸೇವಿಸುವವರ ಸಂಖ್ಯೆ ಕ್ರಮೇಣ ಏರಿದಂತೆ ಎಲ್ಲೆಲ್ಲಿಯೂ ಚಹದಂಗಡಿಗಳು ಪ್ರಾರಂಭಗೊಂಡು ಅಲ್ಲಿ ಚಹದ ಸೇವನೆಯೊಂದಿಗೆ ಸಾಮಾಜಿಕ ವಿಚಾರಗಳನ್ನು ಚರ್ಚಿಸುವ ವೇದಿಕೆಗಳಾಗಿಯೂ ಪರಿವರ್ತನೆಗೊಂಡವು.

ಚೀನಾದಲ್ಲಷ್ಟೇ ಪ್ರಚಲಿತವಾಗಿದ್ದ ಚಹಾವು ಕ್ರಿ.ಶ. ೯೦೦ ರಿಂದೀಚೆಗೆ ದೇಶದ ಸುತ್ತಮುತ್ತಲಿನ ಭಾಗಗಳಿಗೆ ವಲಸೆ ಹೋದುದ್ದಲ್ಲದೇ ಕ್ರಮೇಣ ಹದಿನೇಳನೇ ಶತಮಾನದಲ್ಲಿ ಯೂರೋಪ್ ಹಾಗೂ ಅಮೇರಿಕಾಕ್ಕೆ ಲಗ್ಗೆ ಇಟ್ಟಿತು.

ಚಹ ತಯಾರಿಕೆ ಹಾಗೂ ಬಳಸುವಿಕೆಯನ್ನು ಚಿನೀಯರು ಒಂದು ಸಾಂಸ್ಕೃತಿಕ ಕಲೆಯನ್ನಾಗಿಸಿಕೊಂಡಿದ್ದಾರೆ. ಅಥಿತಿಗಳ ಸತ್ಕಾರ ಆರಂಭವಾಗುವುದೇ ಚಹಾ ನೀಡುವಿಕೆಯಿಂದ. ಅನಾದಿ ಕಾಲದ ನಂಬಿಕೆಯಂತೆ ಚಹ ಕುಡಿಯುವ ಅಭ್ಯಾಸವಿರುವ ಬರಹಗಾರರು ಸಾಮಾನ್ಯವಾಗಿ ಹೊರಹೊಮ್ಮಿಸುವ ಬರಹಗಳು ಪ್ರಣಯಭರಿತ ಹಾಗೂ ಅಂತಃಕರಣವನ್ನು ಕಲಕಿಸುವಂಥಹವು. ಅಂದಹಾಗೇ, ಚೀನಾದ ಭಾಷೆಯಲ್ಲಿ "ಛ" ಎಂಬುದರ ಅರ್ಥ "ಹುಡುಕಾಟ"

**ಸಮಗ್ರ ಚಹದ ತಳಿಗಳನ್ನು ಮುಖ್ಯವಾಗಿ ಆರು ಪಂಗಡಗಳನ್ನಾಗಿಸಿದ್ದಾರೆ ಚೀನಿಯರು.**

೧. ಹಸಿರು ಚಹ - ಮೊದಲ ಸ್ಥಾನ ಬಳಕೆಯ ಪ್ರಮಾಣಕ್ಕನುಸಾರವಾಗಿ

೨. ಕಪ್ಪು ಚಹ - ಎರಡನೆಯ ಸ್ಥಾನ ಬಳಕೆಯ ಪ್ರಮಾಣಕ್ಕನುಸಾರವಾಗಿ

೩. ಕಂದು ಚಹ

೪. ಊಲಾಂಗ್ ಚಹ - ಹಸಿರು ಮತ್ತು ಕಂದು ಬಣ್ಣದ ನಡುವಿನ ವಿಧ

೫. ಬಿಳಿ ಚಹ - ಈ ಚಹಕ್ಕೆ ಬಣ್ಣವಿಲ್ಲದಿರುವುದರಿಂದ ಇದನ್ನು ಬಡವರ ಚಹವೆಂದೂ ಕರೆಯುವರು. ಕಾರಣ ಚಹ ಖರೀದಿಸಲು ಅಸಮರ್ಥರಾದವರು ಅತಿಥಿಗಳಿಗೆ ಬರೀ ಬಿಸಿನೀರಿನ ಆತಿಥ್ಯವಷ್ಟೇ ನೀಡುವದರಿಂದ! ವಾಸ್ತವವಾಗಿ ಈ ಚಹ ಬಲು ದುಬಾರಿ!

೬. ಸುವಾಸಿತ ಚಹ - ಸಾಮಾನ್ಯವಾಗಿ ಚಹದ ಎಲೆಗಳೊಂದಿಗೆ ಒಣಗಿದ ಮಲ್ಲಿಗೆ, ಗುಲಾಬಿ ಹಾಗು ಇತರ ಹೂವಿನ ಪಕಳೆಗಳನ್ನು ಬೆರೆಸಿರುತ್ತಾರೆ ಸುವಾಸನೆಗೆಂದು.




ಯಾವುದೇ ಚಹಾದ ಗುಣಮಟ್ಟದ ಶ್ರೇಣಿಯು ಅದರ ಬಣ್ಣ, ವಾಸನೆ ಹಾಗು ರುಚಿಯನ್ನು ಅವಲಂಬಿಸಿರುವುದಲ್ಲದೇ ಎಲ್ಲಿ ಬೆಳೆದಿದ್ದು ಎಂಬುದು ಗಮನಾರ್ಹವಾಗಿರುತ್ತದೆ.

**ಚೀನಿಯರ ಜನನಾಡಿಯಲ್ಲಿ ಪ್ರಚಲಿತವಿರುವ ಚಹ ಸೇವನೆಯ ಉಪಯೋಗಗಳು:**

- ದಾಹ ಇಂಗಿಸಲು
- ಹರ್ಷಚಿತ್ತರಾಗಲು
- ಚಿತ್ತ ಸಮತೋಲನ ಕಾಪಾಡಿಕೊಳ್ಳುವಿಕೆ
- ಉಸಿರಿನ ತಾಜಾತನ ಕಾಪಾಡಿಕೊಳ್ಳುವಿಕೆ
- ಜೀರ್ಣ ಕ್ರಿಯೆಯ ಉದ್ದೀಪನ
- ದೇಹದ ತೂಕ ಇಳಿಸಿಕೊಳ್ಳಲು
- ಹೃದಯ ಸಂಬಂಧದ ಕಾಯಿಲೆಗಳ ನಿಯಂತ್ರಣ
- ಕ್ಯಾನ್ಸರ್ ರೋಗದ ಉಲ್ಬಣತೆಯ ಮೇಲಿನ ನಿಯಂತ್ರಣ
- ರೋಗ ನಿರೋಧಕ ಶಕ್ತಿಯ ವರ್ಧನೆ
- ತ್ವಚೆಯ ತಾಜಾತನವನ್ನು ಕಾಪಾಡಿಕೊಳ್ಳುವಿಕೆ
- ಮದ್ಯಪಾನದಿಂದ ಉಂಟಾದ ನಿಶೆಯ ಇಳಿಸುವಿಕೆ
- ದೀರ್ಘಾಯಸ್ಸನ್ನು ಹೊಂದಲು

**ಚಹ ಸೇವನೆಯ ಬಗ್ಗೆ ಕಿವಿ ಮಾತು:**

- ಚಹವನ್ನು ಬಿಸಿಬಿಸಿಯಾಗೇ ಸೇವಿಸಬೇಕು
- ಕಡುವಾದ ಚಹ ಮಿಶ್ರಣದ ಸೇವನೆ ಆರೋಗ್ಯಕ್ಕೆ ಒಳ್ಳೆಯದಲ್ಲ
- ಚಹದೊಂದಿಗೆ ಔಷಧಿ ಸೇವನೆ ಸಲ್ಲ
- ಚಹದ ಸೇವನೆಯನ್ನು ಊಟಕ್ಕೆ ಮುನ್ನಾ ಮಾಡಬಾರದು

**ಚಹದ ಎಲೆಯನ್ನು ಬಳಸಿದ ನಂತರವೂ ಆಗುವ ಕೆಲವು ಉಪಯೋಗಗಳು:**

- ಪಾತ್ರೆಯ ಜಿಡ್ಡನ್ನು ತೊಡೆಯಲು ಬಳಸಬಹುದು

- ಬಾಯಿಯ ದುರ್ನಾತ ಮರೆ ಮಾಚಲು ಒಂದೆರಡು ಚಹದೆಲೆಗಳನ್ನು ಬಾಯಲ್ಲಿಟ್ಟುಕೊಂಡರೆ ಸಾಕು

- ಪುಟ್ಟ ಬಟ್ಟೆಯ ಚೀಲದಲ್ಲಿ ಒಣಗಿದ ಚಹದ ಎಲೆಗಳನ್ನು ತುಂಬಿ ಕಾರಿನಲ್ಲಿಟ್ಟರೆ ದುರ್ವಾಸನೆ ಮಾಯ

- ಉಳಿದ ಚಹದ ಎಲೆಗಳನ್ನು ಒಣಗಿಸಿ ಒಂದು ಸಣ್ಣ ಚೀಲಕ್ಕೆ ತುಂಬಿದರೆ ತಲೆದಿಂಬಿನಂತೆ ಬಳಸಬಹುದು

- ಒಣಗಿದ ಚಹದ ಎಲೆಗಳನ್ನು ಒಂದು ತಟ್ಟೆಯಲ್ಲಿಟ್ಟು ಬೆಂಕಿ ಹಚ್ಚಿದರೆ ಅದರ ಧೂಮಕ್ಕೆ ಸೊಳ್ಳೆಗಳು ಪರಾರಿ

- ನೀರಿನಲ್ಲಿ ಮೊಟ್ಟೆ ಬೇಯಿಸುವಾಗ ಚಹದ ಎಲೆಗಳನ್ನು ಹಾಕಿ ಅರ್ಧ ಬೆಂದ ಮೊಟ್ಟೆಯ ಕವಚವನ್ನು ಸೀಳಿ ಮತ್ತೆ ಬೇಯಿಸಿದರೆ ಮೊಟ್ಟೆಗಳು ಚಹಾದ ಸುವಾಸನೆಯನ್ನು ಗ್ರಹಿಸಿ ರುಚಿ ದ್ವಿಗುಣವಾಗುತ್ತವೆ

**ಶಿಕ್ಷಣ ವ್ಯೆವಸ್ಥೆ:**

ಇತಿಹಾಸದ ಪುಟಗಳನ್ನು ತಿರುವಿ ಹಾಕಿದರೆ, ಚೀನಾದ ಶಿಕ್ಷಣ ವ್ಯೆವಸ್ಥೆಯು ಕ್ರಿ. ಪೂ ಹದಿನಾರನೆ ಶತಮಾನಕ್ಕೆ ನಮ್ಮನ್ನು ಸೆಳೆದೋಯುತ್ತದೆ.



ಮುಂದೆ, ಆರನೇ ಶತಮಾನದಿಂದ ಶಿಕ್ಷಣದಲ್ಲಿನ ಪಠ್ಯದ ಮೂಲ ಚುನ್ ಚೇಯು ರಾಜವಂಶದ ಸಮಕಾಲೀನನಾದ ದಾರ್ಶನಿಕ ಕನ್‌ಫ್ಯೂಷಿಯಸ್ ಎಂಬುವನು ಸಂಪಾದಿಸಿದ ನಾಲ್ಕು ಮಹಾನ್ ಕೃತಿಗಳಾದ;

೧. ದಾ ಶೂಯೇ - ಬದುಕಲು ಕಲಿಯುವಿಕೆ

೨. ಝೂಂಗ್ ಯಾಂಗ್ - ಅತಿರೇಕವಿಲ್ಲದ ಆದರ್ಶದ ಜೀವನ ಶೈಲಿ

೩. ಲುನ್ ಯೂ - ಹಿತ ವಾಕ್ಯ / ಆಣಿ ಮುತ್ತುಗಳ ಸಂಪಾದನೆ

೪. ಮೆಂಗ್ ಝೀ - ವಂಶ ವೃಕ್ಷ

ಹಾಗೂ ಐದು ಉತ್ಕೃಷ್ಟ ಗ್ರಂಥಮಾಲೆಗಳು ಎಂದೇ ಪ್ರಖ್ಯಾತಿಯಾದವುಗಳು.

೧. ಶೀ ಜಿಂಗ್ - ಸುಮಾರು ೫೦೦ ವರ್ಷಗಳಿಂದ ದೇಶದ ವಿವಿಧೆಡೆಯಲ್ಲಿ ಪ್ರಚಲಿತವಿದ್ದ ಪದ್ಯಗಳನ್ನು ಕಲೆ ಹಾಕಿದ ೩೦೫ ಪದ್ಯಗಳ ಸಂಕಲನ

೨. ಶೂ ಜಿಂಗ್ - ಪುರಾತನ ಚೀನಾದ ಚಾರಿತ್ರಿಕ ಘಟನಾವಳಿಗಳ ಸಂಪಾದನೆ

೩. ಲೀ ಝೀ - ಪುರಾತನ ಚೀನಾದ ಸಾಮಾಜಿಕ ವ್ಯೆವಸ್ಥೆ ಹಾಗೂ ಸಂಪ್ರದಾಯಗಳ ಸಂಕಲನ

೪. ಐ ಚಿಂಗ್ - ಝೌ ರಾಜವಂಶದಲ್ಲಿನ ಸಂಕೀರ್ಣ ಬದಲಾವಣೆಗಳ ಘಟನೆಗಳ ವಿಸ್ತಾರವಾದ ದಾಖಲೆ

೫. ಚುನ್ ಜೀಯು - ಲೂ ರಾಜ್ಯದಲ್ಲಿನ ಮಹತ್ವದ ಘಟನೆಗಳನ್ನು ಕ್ರಿ. ಪೂ. ೭೨೨ ರಿಂದ ಕ್ರಿ. ಪೂ. ೪೮೧ ರವರೆಗಿನ ಅವಧಿಯಲ್ಲಿ ಘಟಿಸಿದ ರಾಜಕೀಯ, ವಾಣಿಜ್ಯ, ಸಾಂಸ್ಕೃತಿಕ, ಖಗೋಳ ಶಾಸ್ತ್ರ, ಹಾಗೂ ಸಾಮಾಜಿಕ ವ್ಯೆವಸ್ಥೆಯನ್ನು ಯಥಾವತ್ತಾಗಿ ದಾಖಲಿಸಿದ್ದು ಅತ್ಯಮೂಲ್ಯವಾದ ಕೃತಿ ಎನಿಸಿದೆ.

ನಂತರ, ಸೂಯ್ ಮತ್ತು ತಾಂಗ್ ರಾಜಮನೆತನದ ಆಳ್ವಿಕೆಯ ಅವಧಿಯಲ್ಲಿ ಕ್ಲಿಷ್ಟ ಹಾಗೂ ಉನ್ನತ ಸಮಾಜಕ್ಕಷ್ಟೇ ಸೀಮಿತವಾಗಿದ್ದ ಪಠ್ಯವು ಪರಿಷ್ಕೃತಗೊಂಡು ಕೇಜೂ ಎಂಬ ಶಾಲಾ ಶಿಕ್ಷಣದ ಪದ್ಧತಿಯಿಂದ ಸಾಮಾನ್ಯರೂ ವಿದ್ಯಾಭ್ಯಾಸ ಮಾಡುವಂತಾಯಿತು. ಆದರೂ ಶೇಕಡ ಮೂವತ್ತರಿಂದ ನಲವತ್ತರಷ್ಟು ಗಂಡಸರಿಗೆ ಮಾತ್ರ ಓದಲು ಹಾಗೂ ಬರೆಯಲು ಸಾಧ್ಯವಾಯಿತು. ಶೇಕಡಾ ಹತ್ತರಿಂದ ಹದಿನೈದು ಭಾಗ ಉನ್ನತ ವಿದ್ಯಾಭ್ಯಾಸದಲ್ಲಿ ತೊಡಗಿಕೊಳ್ಳುವಂತಾಯಿತು. ಇಸವಿ ೧೯೧೧ ರ ತನಕ ಮೇಲಿನ ಪಠ್ಯ ಕ್ರಮದಲ್ಲಿ ಕಾಲಕ್ಕನುಗುಣವಾಗಿ ಕನಿಷ್ಟ ಬದಲಾವಣೆಯೊಂದಿಗೆ ಅನುಸರಿಸಿಕೊಂಡು ಬಂದಿದ್ದ ಪಠ್ಯ ವಿಷಯಗಳನ್ನು ಚೀನಾ ದೇಶವು ತನ್ನ ಶಿಕ್ಷಣ ಪದ್ಧತಿಯನ್ನು ನವೀಕರಣಕ್ಕೆ ಅಳವಡಿಸಲು ತನಗೆ ಪ್ರಮುಖವಾಗಿ ಪ್ರಭಾವಿತವಾದ ದೇಶಗಳೆಂದರೆ ಯೂರೋಪ್, ಅಮೇರಿಕಾ ಹಾಗೂ ಜಪಾನ್. ಇಸವಿ ೧೯೫೬ರಲ್ಲಿ ಮ್ಯಾಂಡರಿನ್ (ಪು ತಾಂಗ್ ಹುವಾ) ಭಾಷೆಯನ್ನು ದೇಶಾದ್ಯಂತ ಏಕ ಬೋಧನಾ ಭಾಷೆಯನ್ನಾಗಿಸಲು ಆರಂಭಗೊಂಡು ಇಸವಿ ೧೯೭೭ ರ ಹೊತ್ತಿಗೆ ದೇಶದುದ್ದಗಲಕ್ಕೂ ಶೇಕಡಾ ನೂರರಷ್ಟು ಅನುಷ್ಠಾನಗೊಳ್ಳಲು ಸಾಧ್ಯವಾಯಿತು.

ಇಸವಿ ೧೯೭೮ರಲ್ಲಿ ಚೀನಾ ದೇಶವು ತನ್ನನ್ನು ಹೊರಪ್ರಪಂಚಕ್ಕೆ ತೆರೆದುಕೊಂಡಾಗಲಷ್ಟೇ ಅರಿವಾದ ಪಾಶ್ಚಿಮಾತ್ಯರ ಸಂಸ್ಕೃತಿ ಮತ್ತು ತಾಂತ್ರಿಕತೆಯನ್ನು ಅಳವಡಿಸಿಕೊಳ್ಳಲು ತನ್ನಲ್ಲಿದ್ದ ಸಾಂಪ್ರದಾಯಿಕ ಶಿಕ್ಷಣ ಜಗತ್ತಿನಲ್ಲಿ ಬೆಸೆದು ನಿಜವಾದ ಹೊಸ ಶಕೆಯನ್ನು ಆರಂಭಿಸಿತು ಮುಖ್ಯವಾಗಿ ನಗರಗಳ ಮೂಲಕ! ಹಳ್ಳಿ ಹಾಗೂ ಗುಡ್ಡಗಾಡಿನಲ್ಲಿ ಸಾಂಪ್ರದಾಯಿಕ ಶಿಕ್ಷಣ ಮುಂದುವರೆಯತೊಡಗಿತು. ಇಸವಿ ೧೯೮೦ ರಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರ ಒಪ್ಪಿಗೆ ಸೂಚಿಸಿತು.

ಇಸವಿ ೧೯೮೫ ರಲ್ಲಿ ಆಡಳಿತದಲ್ಲಿದ್ದ (ಸಿ.ಸಿ.ಸಿ.ಪಿ) ಚೀನಾ ಪಕ್ಷದ ಕೇಂದ್ರೀಯ ಸಂಘ ಜಾರಿಗೊಳಿಸಿದ ಆದೇಶದಂತೆ "ಪ್ರತಿಯೊಬ್ಬರಿಗೂ ಕಡ್ಡಾಯ ಶಿಕ್ಷಣ"ದ ಜವಾಬ್ದಾರಿಯನ್ನು ಸ್ಥಳೀಯ ಸರ್ಕಾರಕ್ಕೆ ವರ್ಗಾಯಿಸಲಾಯಿತು. ನಂತರ ಇಸವಿ ೧೯೮೬ ರಲ್ಲಿ "ಕಡ್ಡಾಯ ಶಿಕ್ಷಣ"ದ ಮಸೂದೆಯನ್ನು ಕಾನೂನಿನ ಪ್ರಕಾರ ರಾಷ್ಟ್ರೀಕರಣಗೊಳಿಸಿತು. ಈ ಮಸೂದೆಯ ಪ್ರಕಾರ ದೇಶದಲ್ಲಿರುವ ಎಲ್ಲಾ ಅರ್ಹ ಮಕ್ಕಳಿಗೆ ೯ ವರ್ಷಗಳ ಅವಧಿಯ ಬೋಧನಾ ಶುಲ್ಕ ರಹಿತ ವಿದ್ಯಾಭ್ಯಾಸ ದೊರಕುವಂತಾಯಿತು. ಈ ಅವಧಿಗೆ ತಗಲುವ ಉಚಿತ ವಿದ್ಯಾಭ್ಯಾಸದ ವೆಚ್ಚವನ್ನು ಕೇಂದ್ರ, ರಾಜ್ಯ ಹಾಗೂ ಸ್ಥಳೀಯ ಸರ್ಕಾರಗಳು ತಮ್ಮ ಖಜಾನೆಯಿಂದ ಭರಿಸುತ್ತವೆ. ಇತ್ತೀಚಿನ ಅಂಕಿ ಅಂಶದಂತೆ ಒಟ್ಟಾರೆ ಅರ್ಹ ವಯೋಮಾನದ ನಾಗರೀಕರ ಸಂಖ್ಯೆಯ ಶೇಕಡ ೯೯.೭% ರಷ್ಟು ಜನರು ಕಡ್ಡಾಯ ಶಿಕ್ಷಣದ ಫಲಾನುಭವಿಗಳು.

ಮಕ್ಕಳ ವಿದ್ಯಾಭ್ಯಾಸದ ಪಯಣ ಅವರ ಮೂರನೇ ವಯಸ್ಸಿನಿಂದ ಆರಂಭವಾಗುವುದು ಶಿಶುವಿಹಾರ ಮತ್ತು ಕಿಂಡರ್‌ಗಾರ್ಟನ್ ಗಳಿಂದ. ಆರ್ಥಿಕವಾಗಿ ಶಕ್ತವಿದ್ದವರು ಮಾತ್ರ ಇದರ ಫಲಾನುಭವಿಗಳು. ಸಾಮಾನ್ಯವಾಗಿ ಪೋಷಕರು ವಾಸಿಸುತ್ತಿರುವ ವಲಯಗಳಲ್ಲಿ ಲಭ್ಯವಿರುವ ಶಾಲೆಗಳಲ್ಲಿ ಮಾತ್ರ ತಮ್ಮ ಮಕ್ಕಳನ್ನು ದಾಖಲಾಗಿಸಲು ಅವಕಾಶವಿದ್ದು, ಒಂದು ವೇಳೆ ಬೇರೆ ವಲಯದಲ್ಲಿರುವ ಶಾಲೆಗೆ ದಾಖಲು ಮಾಡಿಸಬೇಕೆಂದರೆ, ಆ ವಲಯದಲ್ಲಿನ ಎಲ್ಲಾ ಅರ್ಹ ಮಕ್ಕಳಿಗೆ ಅವಕಾಶ ಲಭಿಸಿ ತರಗತಿಯಲ್ಲಿನ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಕಡಿತವಿದ್ದರೆ ಮಾತ್ರ ದಾಖಲು ಮಾಡಿಕೊಳ್ಳಲು ಪರಿಗಣಿಸಲಾಗುತ್ತದೆ.

ದಾಖಲಿಸುವ ಸಂಸ್ಥೆಯ ಅನುಸಾರವಾಗಿ, ವಾರ್ಷಿಕ ರೂಪಾಯಿ ಅರವತ್ತು ಸಾವಿರದಿಂದ ಒಂದೂವರೆ ಲಕ್ಷದವರೆಗೂ ಖರ್ಚು ಮಾಡಬೇಕು ಪ್ರತೀ ಮಗುವಿಗೆ. ಮೂರು ವರ್ಷದ ಅವಧಿಯಲ್ಲಿ ತರಗತಿಯ ವೇಳೆಯಲ್ಲಿ ಮುಖ್ಯವಾಗ ಆಟ, ಊಟ ಮತ್ತು ನಿದ್ದೆಯಲ್ಲದೇ ಭಾಷೆ, ಚಿತ್ರಕಲೆ ಹಾಗೂ ಸಂಗೀತದ ಬಗ್ಗೆ ಪರಿಚಯ ಮಾಡಿಕೊದಲಾಗುತ್ತದೆ.

ಏಳನೆ ವರ್ಷವಾಗುತ್ತಿದ್ದ ಹಾಗೇ ಮುಂದಿನ ಒಂಭತ್ತು ವರ್ಷಗಳ ಕಡ್ಡಾಯ ಶಿಕ್ಷಣವನ್ನು ಪ್ರತೀಯೊಬ್ಬ ಮಗುವು ಯಾವುದೇ ರಿಯಾಯಿತಿ ಇಲ್ಲದೇ ಪೂರೈಸಬೇಕು. ಅನಾರೋಗ್ಯ ಅಥವಾ ಬುದ್ಧಿಮಾಂಧ್ಯತೆಯನ್ನು ಹೊರತುಪಡಿಸಿ.

ಪ್ರಾಥಮಿಕ ಶಾಲೆಯ ಆರು ವರ್ಷಗಳ ಅವಧಿಯಲ್ಲಿ ಮ್ಯಾಂಡರಿನ್ ಭಾಷೆ, ಗಣಿತ, ಆಂಗ್ಲ ಭಾಷೆ, ಪ್ರಕೃತಿಯ ಪರಿಚಯ, ಸಂಗೀತ, ಚಿತ್ರಕಲೆ ಮತ್ತು ವ್ಯಾಯಾಮವನ್ನು ಕಲಿಸಲಾಗುತ್ತದೆ.
ಹಿರಿಯ ಪ್ರಾಥಮಿಕ ಶಾಲೆಯ ಮೂರು ವರ್ಷಗಳ ಅವಧಿಯಲ್ಲಿ ಮ್ಯಾಂಡರಿನ್ ಭಾಷೆ, ಆಂಗ್ಲ ಭಾಷೆ, ಗಣಿತ, ಚರಿತ್ರೆ, ಭೌತಶಾಸ್ತ್ರ, ರಾಸಾಯನಿಕ ಶಾಸ್ತ್ರ ಹಾಗೂ ಭೂಗೋಳ ಕಲಿಯುವರು.
ಒಂಭತ್ತು ವರ್ಷಗಳ ವ್ಯಾಸಂಗದ ಅವಧಿಯಲ್ಲಿ ಪ್ರತೀವಾರ ವಿದ್ಯಾರ್ಥಿಗಳಿಗೆ ಆರೋಗ್ಯ, ಮಾನಸಿಕ ಸ್ಥಿತಿ ಮತ್ತು ಕಲಿಯುವಿಕೆಯ ತೊಂದರೆಯ ಬಗ್ಗೆ ಪ್ರಶ್ನೋತ್ತರ ಮಾಲಿಕೆಯನ್ನು ನಡೆಸುವುದಲ್ಲದೇ ಇದನೇ ತರಗತಿಯಿಂದ ಮಾದಕ ವಸ್ತುಗಳು ಹಾಗೂ ಲೈಂಗಿಕ ಹಾವಳಿ ಮತ್ತು ಹಾನಿಗಳ ಬಗ್ಗೆ ಚರ್ಚೆಯನ್ನು ಏರ್ಪಡಿಸಲಾಗುತ್ತದೆ.
ಎಲ್ಲರಿಗೂ ಕಡ್ಡಾಯ ಶಿಕ್ಷಣವೆಂಬ ಕಾಯ್ದೆಯನ್ವಯ ಬೋಧನಾ ಶುಲ್ಕವಿಲ್ಲದ್ದಿದ್ದರೂ ಪ್ರತೀ ಮಗುವಿನ ಪಠ್ಯ ಪುಸ್ತಕಗಳು, ನೋಟ್ ಪುಸ್ತಕಗಳು, ಸಮವಸ್ತ್ರ, ಸಾಮಾನ್ಯ ಜ್ಞಾನ ಪುಸ್ತಕಗಳು ಹಾಗೂ ಇತರೆ ಎಂದು ವಾರ್ಷಿಕ ಎಂಭತ್ತು ಸಾವಿರದಿಂದ ಒಂದೂವರೆ ಲಕ್ಷದವರೆಗೆ ಖರ್ಚು ಬರುತ್ತದೆ.

ಇಡೀ ಒಂಭತ್ತು ವರ್ಷಗಳ ವಿದ್ಯಾರ್ಥಿ ಜೀವನದಲ್ಲಿ ಕಲಿಕೆಯ ವಿಷಯಗಳನ್ನು ಶೇಕಡಾವಾರು ವಿಭಾಗಿದರೆ ಅರಿವಾಗುವುದು ಹೀಗೆ;
ಮ್ಯಾಂಡರಿನ್ ಭಾಷೆ ೨೩%, ಇತರೆ ಪಠ್ಯ ವಿಷಯಗಳು ೨೦%, ಗಣಿತ ೧೬%, ದೈಹಿಕ ವ್ಯಾಯಾಮ ೧೨%, ಕಲೆ, ಚಿತ್ರಕಲೆ ಮತ್ತು ಸಂಗೀತ ೧೨%, ನೀತಿ ಬೋಧನೆ ೯% ಆಂಗ್ಲ ಭಾಷೆ ೮%

ಒಂಭತ್ತು ವರ್ಷಗಳ ವ್ಯಾಸಂಗದ ತರುವಾಯ (ಎನ್.ಸಿ.ಇ.ಇ.) ರಾಷ್ಟ್ರೀಯ ಕಾಲೇಜ್ ಪ್ರವೇಶಾತಿ ಪರೀಕ್ಷೆಯನ್ನು ದಾಟಿದ ವಿದ್ಯಾರ್ಥಿಗಳಿಗೆ ಆಯ್ಕೆ ಮಾಡಲು ಮೂರು ದಾರಿಗಳಿವೆ.

೧. ಹೈಸ್ಕೂಲ್ - ನಾಲ್ಕು ವರ್ಷದ ಹೈಸ್ಕೂಲ್‌ನ ವಿದ್ಯಾಭ್ಯಾಸಕ್ಕೆ ಪ್ರವೇಶಾತಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಶ್ರೇಣಿಗನುಸಾರವಾಗಿ ದೊರಕಿದ ವಿದ್ಯಾಸಂಸ್ಥೆಗೆ ತಕ್ಕಂತೆ ವಾರ್ಷಿಕ ಒಂದುವರೆ ಲಕ್ಷದಿಂದ ಎರಡು ಲಕ್ಷದವರೆಗೆ ಖರ್ಚು ಇರುತ್ತದೆ.
೨. ಪ್ರೊಫೆಷನಲ್ ಕೋರ್ಸ್ - ಅವಧಿ ಎರಡರಿಂದ ಮೂರು ವರ್ಷಗಳು. ಆಯ್ಕೆ ಮಾಡಿದ ವಿಷಯಕ್ಕನುಸಾರವಾಗಿ ಅಂದಾಜು ಮೂರು ಲಕ್ಷಗಳಲ್ಲಿ ತರಭೇತಿ ಪೂರ್ಣಗೊಳಿಸಬಹುದು.
೩. ಉದ್ಯೋಗದ ದಾರಿ ಅರಸುವುದು

ನಾಲ್ಕು ವರ್ಷಗಳ ಹೈಸ್ಕೂಲ್ ವಿದ್ಯಾಭ್ಯಾಸ ಪೂರೈಸಿದ ವಿದ್ಯಾರ್ಥಿಗಳಿಗೆ ಮುಂದೆ ಎರಡು ಮಾರ್ಗವಿದೆ ಆರಿಸಿಕೊಳ್ಳಲು.

೧. ಉನ್ನತಾಭ್ಯಾಸ - ನಾಲ್ಕರಿಂದ ಆರು ವರ್ಷಗಳು. ಖರ್ಚಿನ ಬಾಬ್ತು ಕನಿಷ್ಠ ನಲವತ್ತು ಲಕ್ಷದಿಂದ ಆರಂಭ.

೨. ಉದ್ಯೋಗದ ಬೇಟೆ

ಹೈಸ್ಕೂಲ್ ಅಥವ ಇತರೆ ಉನ್ನತ ವಿದ್ಯಾಭ್ಯಾಸಕ್ಕೆ ತೊಡಗಿಸಿಕೊಳ್ಳುವ ವಿದ್ಯಾರ್ಥಿಗಳು ಕಡ್ಡಾಯವಾಗಿ ಕೆಲವು ವಾರಗಳು ಸೈನಿಕ ಸಂಬಂಧಿ ತರಭೇತಿಯನ್ನು ಹೊಂದಲೇಬೇಕು

ಆರ್ಥಿಕವಾಗಿ ಹಿಂದುಳಿದ ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸಕ್ಕೆ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಮಾತ್ರ ವಿದ್ಯಾ-ಕಡವನ್ನು ಪಡೆಯಬಹುದು. ಹಿಂದಿರುಗಿಸುವ ಅವಧಿ ೮ ವರ್ಷಗಳು. ಮೊದಲ ನಾಲ್ಕು ವರ್ಷಗಳು ಅಂದರೆ ವಿದ್ಯಾರ್ಜನೆಯ ಅವಧಿಯಲ್ಲಿ, ಪಡೆದುಕೊಂಡ ಕಡದ ಮೇಲಿನ ಬಡ್ಡಿಯಲ್ಲಿ ಶೇಕಡಾ ಐವತ್ತರಷ್ಟು ರಿಯಾಯಿತಿ ಇದ್ದು ನಾಲ್ಕು ವರ್ಷದ ತರುವಾಯ ಈ ರಿಯಾಯಿತಿಯನ್ನು ರದ್ದು ಮಾಡಲಾಗುತ್ತದೆ.

**ಪೋಷಕರ ಅಳಲು:**

- ವಿಪರೀತ ಮನೆಗೆಲಸ
- ಮಕ್ಕಳ ಮೇಲೆ ಮಿತಿಮೀರಿದ ಒತ್ತಡ
- ಕಡ್ಡಾಯವಾಗಿ ಮನೆಪಾಠಕ್ಕೆ ಕಳುಹಿಸಬೇಕು
- ಬೆಳಿಗ್ಗೆ ಏಳರಿಂದ ರಾತ್ರಿ ಎಂಟು ಘಂಟೆಯ ತನಕ ಅವಿರತ ಅಭ್ಯಾಸ
- ವಾರಾಂತ್ಯಗಳಲ್ಲಿನ ಅನಧಿಕೃತ ತರಗತಿಗಳ ಹೇರಿಕೆ (ಉಪಾಧ್ಯಾಯರ ಅಸ್ತಿತ್ವ ಹಾಗೂ ಶಾಲೆಯ ಹೆಗ್ಗಳಿಕೆಗೋಸ್ಕರ)
- ತರಗತಿಯ ಉಪಾಧ್ಯಾಯ(ಯಿನಿ)ಯರು ಸೂಚಿಸಿದ ಅಂಗಡಿಗಳಲ್ಲೇ ಪಠ್ಯ, ಸಾಮಾನ್ಯ ಜ್ಞಾನ ಹಾಗೂ ನೋಟ್ ಪುಸ್ತಕಗಳನ್ನು ಮತ್ತು ಸಮವಸ್ತ್ರವನ್ನು ಖರೀದಿಸಬೇಕು.
- ಶಾಲೆಯು ಸೂಚಿಸುವ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸಲೇಬೇಕು

**ವಿದ್ಯಾರ್ಥಿಗಳ ಸ್ಥಿತಿ:**

- ಪಠ್ಯದ ವಿಷಯ, ಉಪಾಧ್ಯಾಯರ ಹಾಗೂ ಶಾಲೆಯ ರೀತಿ ನೀತಿಗಳನ್ನು ಪಾಲಿಸುವುದಷ್ಟೇ ತಮ್ಮ ಕೆಲಸ
- ಪ್ರಶ್ನಿಸಲು ಮತ್ತು ಚರ್ಚಿಸಲು ಅವಕಾಶವಿಲ್ಲ
- ಬಾಯಿ ಪಾಠ ಮಾಡಿಕೊಂಡು ಒಪ್ಪಿಸುವುದಷ್ಟೇ ತಮ್ಮ ಜವಾಬ್ದಾರಿ
- ಗಿಳಿಪಾಠದಿಂದ ಗಿಟ್ಟುವ ಲಾಭ ಪರೀಕ್ಷೆಯಲ್ಲಿ ಅಂಕ
- ಸೃಜನಾತ್ಮಕತೆ ಹಾಗೂ ಕ್ರಿಯಾಶೀಲತೆಯ ಬೆಳವಣಿಗೆಗೆ ಅವಕಾಶವಿಲ್ಲ
- ಬುದ್ಧಿವಂತ ಹಾಗೂ ದಡ್ಡ ವಿದ್ಯಾರ್ಥಿಗಳನ್ನು ಒಂದೇ ತಕ್ಕಡಿಯಲ್ಲಿ ತೂಗುವಿಕೆ
- ತಮ್ಮ ಅಭಿರುಚಿ ಹಾಗೂ ಆಸಕ್ತಿಗೆ ತಕ್ಕಂತೆ ಬೆಳೆದು ಮುಂದುವರೆಯಲು ಕನಿಷ್ಟ ಅವಕಾಶ
- ಒಂಭತ್ತು ವರ್ಷಗಳಲ್ಲಿ ಕಲಿಯುವುದು ಬರೀ ಪ್ರಾಥಮಿಕ ಮಟ್ಟದ ಜ್ಞಾನವನ್ನು ಮಾತ್ರ
- ಪಠ್ಯಗಳ ವಿಷಯ ಮೌಖಿಕ ಪ್ರವಚನಕ್ಕೆ ಮಾತ್ರ ಮೀಸಲಾಗಿರುವುದರಿಂದ ಪ್ರಾಯೋಗಿಕವಾಗಿ ಅರಿಯಲು ಅವಕಾಶವಿಲ್ಲಾ
- ಸಾಮಾನ್ಯವಾಗಿ ಉಪಾಧ್ಯಾಯರು ಪಠ್ಯದಲ್ಲಿರುವ ವಿಷಯವನ್ನು ತರಗತಿಯಲ್ಲಿ ವಿದ್ಯಾರ್ಥಿಗಳ ಎದಿರು ನಿಂತು ಓದುವುದಷ್ಟೇ

**ಉಪಾಧ್ಯಾಯರ ಸ್ಥಿತಿ:**

- ವಿದ್ಯಾರ್ಥಿಗಳ ಶೇಕಡಾವಾರು ತೇರ್ಗಡೆಯ ಅನುಸಾರ ಅವರ ಸ್ಥಾನಮಾನಗಳ ನಿರ್ಧಾರ
- ಪ್ರತೀಶತ ನೂರರಷ್ಟು ವಿದ್ಯಾರ್ಥಿಗಳು ತೇರ್ಗಡೆಯಾಗದಿದ್ದರೆ ಬಡ್ತಿಗೆ ತಡೆ ಮತ್ತು ಉದ್ಯೋಗಕ್ಕೆ ಕಂಟಕ
- ಕನಿಷ್ಠ ವೇತನದೊಂದಿಗೆ ಗರಿಷ್ಠ ಜವಾಬ್ದಾರಿ (ರಾಜ್ಯ ಸರ್ಕಾರದ ಅವರೋಹಣ ಕ್ರಮದ ವೇತನಾ ಪಟ್ಟಿಯಲ್ಲಿರುವ ಹನ್ನೆರಡು ಹಂತಗಳಲ್ಲಿ ಉಪಾಧ್ಯಾಯರ ಸ್ಥಾನ ಹತ್ತನೆಯದು)
- ಪರಿಷ್ಕೃತಗೊಂಡ ಪಠ್ಯವಿಷಯಗಳ ಅನುಸಾರ ತರಭೇತಿಯನ್ನು ಯಾವುದೇ ಸಬೂಬಿಲ್ಲದೇ ಪೂರ್ಣಗೊಳಿಸಬೇಕಾದ ಜವಾಬ್ದಾರಿ

ಅಂಕಿ-ಅಂಶದ ಪ್ರಕಾರ ಕಾಲೇಜುಗಳಿಂದ ಹೊರಬರುತ್ತಿರುವ ಪದವೀಧರ ವಿದ್ಯಾರ್ಥಿಗಳನ್ನು ಅವರ ವ್ಯಾಸಂಗದ ಐಚ್ಛಿಕ ವಿಷಯಗಳಿಗೆ ಅನುಸಾರವಾಗಿ ವಿಂಗಡಿಸಿದರೆ ೩೮% ತಂತ್ರಜ್ಞಾನ, ೧೫.೨% ಶಿಕ್ಷಣ, ಸಾಹಿತ್ಯ, ಚರಿತ್ರೆ ಮತ್ತು ತತ್ವಶಾಸ್ತ್ರ, ೧೪.೮% ವಾಣಿಜ್ಯ, ಕಾನೂನು ಮತ್ತು ಮ್ಯಾನೇಜೆಮೆಂಟ್, ೭.೨% ವೈದ್ಯಕೀಯ, ೫% ವಿಜ್ಞಾನ ಮತ್ತು ೧.೯% ಕೃಷಿಗೆ ಸಂಬಂಧಪಟ್ಟದ್ದು.
ನಗರಗಳಲ್ಲಿನ ಶಾಲೆಗಳ ಪರಿಸ್ಥಿತಿಯು ಈ ಮಾದರಿಯಾದರೆ, ಹಳ್ಳಿ ಹಾಗೂ ಗುಡ್ಡಗಾಡುಗಳಲ್ಲಿನ ದೃಶ್ಯ ಬೇರೆಯದೇ ಆಯಾಮವನ್ನು ಮೈದುಂಬಿಕೊಂಡಿದೆ. ಮೊತ್ತ ಮೊದಲಿಗೆ ದಾಖಲಾಗುವ ವಿದ್ಯಾರ್ಥಿಗಳ ಸಂಖ್ಯೆಯೇ ವಿರಳ. ಕೇಂದ್ರೀಯ ಶಿಕ್ಷಣ ಇಲಾಖೆಯಿಂದ ಯಾವುದೇ ಕಾನೂನು ಅಥವಾ ಮಾರ್ಗಸೂಚಿಗಳು ಇಲ್ಲಿನ ಶಾಲೆಗಳನ್ನು ತಲುಪುವಷ್ಟರಲ್ಲಿ ಅವುಗಳ ಮೂಲೋದ್ದೇಶದ ಕಾವು

ಆರಿ ತಣ್ಣಗಾಗಿರುತ್ತದೆ. ಸರ್ಕಾರದಿಂದ ಜಾರಿಯಾಗುವ ಆರ್ಥಿಕ ಅನುದಾನವು ಶಾಲೆಗಳ ಬಾಗಿಲಿಗೆ ತಲುಪುವಷ್ಟರಲ್ಲಿ ಅಂಕೆಗಳ ಪ್ರಮಾಣವು ಗಮನಾರ್ಹವಾಗಿ ಕುಬ್ಜಗೊಳ್ಳುವುದು. ಬಹುತೇಕ ಶಾಲೆಗಳು, ಶಾಲೆಯೆನಿಸಿಕೊಳ್ಳಬೇಕಾದರೆ ಇರಲೇಬೇಕಾದ ಕನಿಷ್ಠ ಸೌಕರ್ಯಗಳಿಂದ ವಂಚಿತ. ಶಾಲೆಗಳಲ್ಲಿನ ಒಟ್ಟಾರೆ ಉಪಾಧ್ಯಾಯರ ಸಂಖ್ಯೆಯಲ್ಲಿ ಶೇಕಡಾ ಐವತ್ತಕ್ಕೂ ಮೇಲ್ಪಟ್ಟ ಉಪಾಧ್ಯಾಯರಿಗೆ ಉಪಾಧ್ಯಾಯ ವೃತ್ತಿಗೆ ಅತ್ಯಾವಶ್ಯಕವಾದ ಅಧಿಕೃತ ಪ್ರಮಾಣ ಪತ್ರವೇ ಇರುವುದಿಲ್ಲಾ ಕಾರಣ ಹಳ್ಳಿ ಮತ್ತು ಗುಡ್ಡಗಾಡುಗಳಲ್ಲಿ ಉಪಾಧ್ಯಾಯ ವೃತ್ತಿಗೆ ತಮ್ಮನ್ನು ತೊಡಗಿಸಿಕೊಳ್ಳುವವರ ಸಂಖ್ಯೆ ಬಲು ವಿರಳವಾಗಿರುವುದರಿಂದ ಯಾರು ದೊರಕಿದರೂ ಸರಿ ಬೋಧನಾ ವೃತ್ತಿಗೆ ದಾಖಲು ಮಾಡಿಕೊಳ್ಳಲಾಗುತ್ತದೆ. ಉಪಾಧ್ಯಾಯರು ತಮ್ಮ ಬಹುತೇಕ ಸಮಯವನ್ನು ಜೀವನೋಪಾಯಕ್ಕೆ ಬೇಕಾದ ಆದಾಯದ ಗಳಿಕೆಯ ಮಾರ್ಗಕ್ಕೆ ಮೀಸಲಿಡುವರು. ಹೆಚ್ಚಿನ ಪ್ರದೇಶಗಳಲ್ಲಿ ಅಧೀಕೃತ ಉಪಾಧ್ಯಾಯರಿಗೆ ಸರ್ಕಾರದಿಂದ ಕೊಡಲ್ಪಡುವ ಸಾಗುವಳಿ ಭೂಮಿಯ ಉಸ್ತುವಾರಿಯ ಜವಾಬ್ದಾರಿಯೂ ಇರುತ್ತದೆ. ಅಧಿಕೃತ ಪ್ರಮಾಣ ಪತ್ರ ಹೊಂದಿರುವ ಹಾಗೂ ಹೊಂದಿಲ್ಲದಿರುವ ಉಪಾಧ್ಯಾಯರ ವೇತನದಲ್ಲಿನ ಅನುಪಾತ ೧೦:೧. ಸರ್ಕಾರ ಎಂದೋ ಹೊರಡಿಸಿರುವ ಕಾಯಿದೆಯನ್ವಯ ಅನಧಿಕೃತ ಉಪಾಧ್ಯಾಯರನ್ನು ತಕ್ಕ ತರಭೇತಿಗೆ ಒಳಪಡಿಸುವ ಮತ್ತು ಅನುತ್ತೀರ್ಣರಾದ ಉಪಾಧ್ಯಾಯರ ಎತ್ತಂಗಡಿಗೆ ಇನ್ನೂ ಕಾಲ ಕೂಡಿಬರದಿರುವುದರಿಂದ "ಕಾಲ ತಳ್ಳುವ" ಪ್ರಕ್ರಿಯೆ ಐದರಿಂದ ಹಿಡಿದು ಮೂವತ್ತು ವರ್ಷಕ್ಕೆ ಮುಟ್ಟುತ್ತಲಿದೆ. ದುರದೃಷ್ಟದ ಸಂಗತಿ ಎಂದರೆ ತರಭೇತಿಗೊಳಗಾದ ಅನಧಿಕೃತ ಉಪಾಧ್ಯಾಯರಲ್ಲಿ ಬಹುತೇಕ ಮಂದಿ ಪ್ರಾಥಮಿಕ ಮ್ಯಾಂಡರಿನ್ ಭಾಷೆಯ ಪರೀಕ್ಷೆಯಲ್ಲೇ ಅನುತ್ತೀರ್ಣರು! ಅಂದಾಜಿನಂತೆ ಇಂತಹ ಉಪಾಧ್ಯಾಯರ ಸಂಖ್ಯೆ ಎಂಟು ಲಕ್ಷ ಮೀರಿದೆ. ಇದೆಲ್ಲದರ ನಡುವೆ, ಹಲವು ಶಾಲೆಗಳಲ್ಲಂತೂ ಮಾಸಿಕ ಸಂಬಳವನ್ನು ಎದುರು ನೋಡುತ್ತಾ ವರ್ಷಗಳೇ ಸಂದಿವೆ. ಇಂಥಾ ಪರಿಸ್ಥಿತಿಯಲ್ಲಿ ಹೊರಬೀಳುವ ವಿದ್ಯಾರ್ಥಿಗಳ ಪಾಡು ಯಾರಿಗೂ ಬೇಡ. ಅತೀ ಕನಿಷ್ಠ ಸಂಖ್ಯೆಯಲ್ಲಿ ಉನ್ನತಾಭ್ಯಾಸವನ್ನು ಅರಸುವ ಇವರಿಗೆ ನಗರದಲ್ಲಿನ ಯಾವುದೇ ವಿದ್ಯಾಸಂಸ್ಥೆಯು ಮಣೆ ಹಾಕುವುದಿಲ್ಲವಾದ್ದರಿಂದ ರೋಸಿ ಹೋಗಿ ಯಾವುದಾದರು ಕೆಲಸದ ದಾರಿ ಇಲ್ಲಾ ಉದ್ಯೋಗಕ್ಕೆ ಪೂರಕವಾದ ತರಭೇತಿ ಸಂಸ್ಥೆಗಳಿಗೆ ದಾಖಲಾಗುತ್ತಾರೆ.

**ವಯಸ್ಕರ ಶಿಕ್ಷಣ:**

ಇಸವಿ ೧೯೮೭ ರಿಂದ ಚಾಲ್ತಿಯಲ್ಲಿದ್ದು ೧೯೮೮ರಲ್ಲಿ ಕಾಯಿದೆಯಾಗಿ ಬಿಡುಗಡೆಗೊಡು ೧೯೯೩ ರಲ್ಲಿ ಪರಿಶ್ಕೃತಗೊಡಂತೆ ಹದಿನೈದರಿಂದ ನಲವತ್ತರವರೆಗಿನ ವಯೋಮಾನದ ಎಲ್ಲಾ ನಾಗರೀಕರು ಇದರ ಫಲಾನುಭವಿಗಳು. ಈ ಕಾಯಿದೆಯ ಪ್ರಕಾರ ಅನಕ್ಷರಸ್ಥ ಮತ್ತು ಅರೇ ಅಕ್ಷರಸ್ಥರಾದ ರೈತಾಪಿ ವರ್ಗ ಹಾಗೂ ಇತರೆ ವರ್ಗಕ್ಕೆ ಪ್ರತ್ಯೇಕವಾಗಿ ಪ್ರಾಥಮಿಕ ಶಿಕ್ಷಣವನ್ನು, ಸಾಮಾನ್ಯ ಉದ್ಯೋಗಗಳಿಗೆ ಪೂರಕವಾಗುವಂಥಹ ತರಭೇತಿಯನ್ನು ಮತ್ತು ತಂತ್ರಜ್ಞಾನದ ಆಧಾರಿತ ವಿಷಯಗಳಲ್ಲಿ ಪರಿಣಿತರಾಗಲು ವಿಶೇಷ ತರಭೇತಿಯನ್ನು ದೊರಕಿಸಲಾಗುತ್ತದೆ.

**ಹಬ್ಬಗಳು:**

**ಚೀನಾದ ಹೊಸ ವರ್ಷ.**

ಚೀನಾದ ಹೊಸ ವರ್ಷದ ಆಚರಣೆಗಿರುವ ಅನಾದಿ ಕಾಲದಿಂದ ನಂಬಿಕೊಂಡು ಬಂದಿರುವ ನಂಬಿಕೆಯಂತೆ, ಒಂದಾನೊಂದು ಕಾಲದಲ್ಲಿ ದಟ್ಟವಾದ ಕಾಡಿನಲ್ಲಿ ನಿಯಾನ್ ಎಂಬ ರಾಕ್ಷಸನಿದ್ದು, ಆತನು ಆಗಾಗ್ಗೆ ಊರಿಗೆ ಬಂದು ತನ್ನ ಅತೀ ಹಿರಿದಾದ ಬಾಯಿಯ ಮೂಲಕ ಒಮ್ಮೆಗೇ ಅನೇಕ ಜನರನ್ನು ಕಬಳಿಸುತ್ತಿದ್ದ. ಈತನ ಈ ಕೃತ್ಯವನ್ನು ಹಿಮ್ಮೆಟ್ಟಿಸಲು ಯಾರೂ ಸಮರ್ಥರಿಲ್ಲದಿದ್ದಾಗ ಮುಂದೆ ಆ ಊರಿಗೆ ಒಬ್ಬ ಸನ್ಯಾಸಿಯ ಆಗಮನವಾಗಿ ಆತನು ಅಲ್ಲಿನ ಜನರ ಕಷ್ಟವನ್ನು ಅರಿತು ಆ ರಾಕ್ಷಸನನ್ನು ತಡೆದು ಓಡಿಸಲು ಎಲ್ಲರ ಮನೆಗಳ ಬಾಗಿಲು ಮತ್ತು ಕಿಟಕಿಗಳ ಮೇಲೆ ಕೆಂಪು ಬಣ್ಣದ ಕಾಗದದ ಚಿತ್ತಾರವನ್ನು ಅಂಟಿಸಲು ಸಲಹೆ ಇತ್ತು ರಾಕ್ಷಸನು ಬಂದಾಗ ಬಿದಿರಿನಿಂದ ಮಾಡಿದ ವಸ್ತುಗಳಿಂದ ದೊಡ್ಡ ಶಬ್ಧವನ್ನು ಮಾಡಲು ಸೂಚಿಸಿ ತೆರಳಿದನು. ಸನ್ಯಾಸಿಯ ಸೂಚನೆಯನ್ನು ಮುಂದೆ ರಾಕ್ಷಸನು ಬಂದಾಗ ಚಾಚೂತಪ್ಪದೆ ಪಾಲಿಸಿ ರಾಕ್ಷಸನ ಉಪಟಳದಿಂದ ಪಾರಾದರು.

ಚಾಂದ್ರಮಾನ ಕ್ಯಾಲೆಂಡರ್‌ನ ಪದ್ದತಿಯಂತೆ, ಸಾಮಾನ್ಯವಾಗಿ ಜನವರಿ ೩೦ನೇ ತಾರೀಖಿನಿಂದ ಫೆಬ್ರವರಿ ೧೦ರ ಅವಧಿಯಲ್ಲಿ ಆರಂಭವಾಗುವ ನವ ವರ್ಷದ ಮೊದಲ ತಿಂಗಳಿನ ಮೊದಲನೆಯ ದಿನವನ್ನು ಚೀನಿಯರು ಹೊಸ ವರ್ಷದ ಆರಂಭವೆಂತಲೂ, ವಸಂತೋತ್ಸವವೆಂದೂ ಪರಿಗಣಿಸಿ ಬಹು ಪ್ರಮುಖವಾದ ಹಾಗೂ ಸಾಂಪ್ರದಾಯಿಕವಾದ ಹಬ್ಬವೆಂದು ನಾಗರೀಕರೆಲ್ಲರ ಮನ್ನಣೆಗೆ ಹಾಗೂ ಪ್ರಾಶಸ್ತ್ಯಕ್ಕೆ ಒಳಗಾಗಿದೆ.

ಬಡವರಿರಲಿ, ಶ್ರೀಮಂತರಿರಲಿ, ದೇಶದ ಅಥವ ಪ್ರಪಂಚದ ಯಾವುದೇ ಮೂಲೆಯಲ್ಲಿ ನೆಲೆಸಿರಲಿ ಈ ಹಬ್ಬಕ್ಕೆ ಬಹುತೇಕ ಎಲ್ಲರೂ ತಮ್ಮ ಹುಟ್ಟೂರಿಗೆ ಒಂದೆರಡು ದಿನಗಳ ಮುಂಚೆಯೇ ಸಾಕಷ್ಟು ಉಡುಗೊರೆ, ಹೊಸ ಬಟ್ಟೆ, ಕುರುಕಲು ತಿಂಡಿಗಳು ಮತ್ತು ಹಣ್ಣುಗಳೊಂದಿಗೆ ವಾಪಸ್ಸಾಗಿ ಮನೆ ಮಂದಿಯೊಡಗೂಡಿ ಒಟ್ಟಾಗಿ ನೆಲೆಸಿದ್ದ ಅನಿಷ್ಟ ತೊಲಗಿ ಅದೃಷ್ಟ ದಯಮಾಡಿಸಲಿ ಎಂಬ ನಂಬಿಕೆಯೊಂದಿಗೆ ಮನೆಯನ್ನು ಶುಚೀರ್ಭೂತಗೊಳಿಸಿ ಕೆಂಪು ಬಣ್ಣದ ಕಾಗದದಿಂದ ತಯಾರಾದ ವಿವಿಧ ಅಲಂಕಾರ ಸಾಮಗ್ರಿಗಳಿಂದ ಇಡೀ ಮನೆಯನ್ನು ಸಮಗ್ರವಾಗಿ ಸಿಂಗರಿಸಿ ನವ ಜೀವನ ಹಾಗೂ ವಸಂತದ ಪುನರಾಗಮನವನ್ನು ಸಡಗರದಿಂದ ಸ್ವಾಗತಿಸುತ್ತಾ ಡಂಪ್ಲಿಂಗ್ ಎಂಬ ವಿಶೇಷವಾದ ಕಡುಬಿನೊಂದಿಗೆ ಇತರೆ ಅಡುಗೆಯನ್ನು ತಯಾರಿಸಿ ವಿಶೇಷವಾಗಿ ಕೋಳಿ ಹಾಗೂ ಮೀನಿನ ಖಾದ್ಯವನ್ನು ಮಾತ್ರ ಮೂರು ದಿನಗಳವರೆಗೆ ಮಿಗಿಸಿಕೊಂಡು ಎಲ್ಲರೂ ಕೂಡಿ ತಿಂದುಂಡು ಶುಭಾಶಯಗಳನ್ನು ಒಬ್ಬರಿಗೊಬ್ಬರು ಹಂಚಿಕೊಳ್ಳುತ್ತಾ ಮುಂದಿನ ಮೂರು ದಿನಗಳನ್ನು ಬಹಳ ಸಂತೋಷವಾಗಿ ಕಳೆಯುತ್ತಾರೆ. ಈ ಸಮಯದಲ್ಲಿ ಸನಿಹದ ಬಂಧು-ಮಿತ್ರರ ಮನೆಗಳಿಗೆ ಭೇಟಿ ಇತ್ತು ಉಡುಗೊರೆ ಹಾಗೂ ತಿಂಡಿಗಳ ಕೊಡು ಕೊಳ್ಳುವಿಕೆ ಪೂರೈಸುತ್ತಾರೆ. ಕೆಲವು ಕುಟುಂಬಗಳಲ್ಲಿ ಹೊಸ ವರ್ಷದ ಸಂದರ್ಭವನ್ನು ಯುವಕ, ಯುವತಿಯರು ತಮ ಭಾವೀ ಪತ್ನಿ ಅಥವ ಪತಿಯರ ಜೊತೆಗೂಡಿ ಹಿರಿಯರಿಗೆ ಪರಿಚಯಿಸುವ ಸಲುವಾಗಿ ಬಳಸಿಕೊಳ್ಳುವರು. ಮತ್ತೆ ಕೆಲವರು ಹೊಸವರ್ಷದ ಸಲುವಾಗಿ ಅನೇಕ ನಿರ್ಧಾರಗಳನ್ನು ಸಂಕಲ್ಪಿಸಿ ಅದನ್ನು ಜಾರಿಗೊಳಿಸಲು ಪ್ರಯತ್ನಿಸುತ್ತಾರೆ. ಮನೆಯಲ್ಲಿನ ಹಿರಿಯರು ಎಲ್ಲಾ ಕಿರಿಯರಿಗೆ ಕೆಂಪು ಬಣ್ಣದ ಕಾಗದದ ಲಕೋಟೆಯಲ್ಲಿ ಯಥಾಶಕ್ತಿ ಹಣ ತುಂಬಿ ವರ್ಷದುದ್ದಕ್ಕೂ ಹಣದ ಹೊಳೆ ಹರಿಯುತ್ತಾ ಸುಖ ಸಂತೋಷದೊಂದಿಗೆ ಅದೃಷ್ಟ ಖುಲಾಯಿಸಲೆಂದು ಹರಸಿ ಉಡುಗೊರೆಯಾಗಿ ನೀಡುತ್ತಾರೆ.

ಹೊಸ ವರ್ಷದ ಮುನ್ನಾ ದಿನದ ನಡು ರಾತ್ರಿಯ ತನಕ ಟೀವಿಯನ್ನು ಹೊಸ ವರ್ಷದ ವಿಶೇಷ ಕಾರ್ಯಕ್ರಮಗಳ ಸಲುವಾಗಿ ಕುಟುಂಬದವರೊಡನೆ ವೀಕ್ಷಿಸುತ್ತಾ ಗಡಿಯಾರ ಹನ್ನೆರಡು ಘಂಟೆ ಬಾರಿಸಿದ ಕೂಡಲೇ ಪಟಾಕಿಗಳನ್ನು ಸಿಡಿಸುತ್ತಾ ತಮ್ಮ ಅತೀತವಾದ ಆನಂದವನ್ನು ವ್ಯಕ್ತಪಡಿಸುತ್ತಾರೆ. ಪಟಾಕಿ ಸಿಡಿಸುವುದರ ಮೂಲೋದ್ದೇಶ, ದುಷ್ಟಶಕ್ತಿಗಳು ಕಿಗಡಚ್ಚಿಕ್ಕುವ ಸದ್ದು ಮತ್ತು ಪ್ರಖರ ಬೆಳಕಿಗೆ ಹೆದರಿ ಹಿಮ್ಮೆಟ್ಟುವುದರಿಂದ ಮುಂದೆ ವರ್ಷದುದ್ದಕ್ಕೂ ಸಂತಸವು ಮನೆ ಮನಗಳಲ್ಲಿ ನೆಲೆಸುವುದೆಂದು. ಈ ಹಬ್ಬದ ಮತ್ತೊಂದು ಆಕರ್ಷಣೆ ಎಂದರೆ "ಸಿಂಹ ಮತ್ತು ಡ್ರ್ಯಾಗನ್ ನೃತ್ಯ" ಸಿಂಹ ಮತ್ತು ಡ್ರ್ಯಾಗನ್‌ನ ಪ್ರತಿಕೃತಿಯನ್ನು ಬಣ್ಣದ ಬಟ್ಟೆ ಅಥವ ಹುಲ್ಲಿನಿಂದ ತಯಾರಿಸಿ ಸೊಗಸಾದ ರಂಗಿನಿಂದ ಸಿಂಗರಿಸಿ ಸಂಜೆಯ ವೇಳೆಯಲ್ಲಿ ಮುಖ್ಯ ಚೌಕಗಳಲ್ಲಿ ಪ್ರಸ್ತುತ ಪಡಿಸುವ ಕಾರ್ಯಕ್ರಮ. ಸ್ಥಿತಿವಂತರು ಕೇವಲ ಮೂರು ದಿನಗಳಲ್ಲದೇ ನಿರಂತರವಾಗಿ ಹದಿನೈದು ರಾತ್ರಿಗಳಲ್ಲಿ ಪಟಾಕಿಯನ್ನು ಸಿಡಿಸುತ್ತಿರುತ್ತಾರೆ. ಕಾರಣ ಹೊಸ ವರ್ಷದ ಸಂಭ್ರಮವು ಕೊನೆಗಾಣುವುದು ಹದಿನೈದನೇ ದಿನದಂದು ಆಚರಿಸುವ ಲಾಂದ್ರದ ಹಬ್ಬದೊಂದಿಗೆ. ಅಂದು ಎಲ್ಲಾ ನಗರಗಳಲ್ಲಿ ಯಾವುದಾದರೂ ಉದ್ಯಾನ ಅಥವ ಖಾಲಿಯಾದ ಜಾಗದಲ್ಲಿ ಕಬ್ಬಿಣ, ಬಿದಿರು ಮತ್ತು ನವಿರಾದ ರಂಗು ರಂಗಿನ ಬಟ್ಟೆಯನ್ನು ಉಪಯೋಗಿಸಿ ಅಸಂಖ್ಯ ಆಕೃತಿಗಳ ಪ್ರತಿಕೃತಿಗಳನ್ನು ನಿರ್ಮಿಸಿ ಪ್ರತಿಕೃತಿಗಳ ಒಳಗೆ ವಿದ್ಯುತ್ ದೀಪಗಳನ್ನು ಹುದುಗಿಸಿ ರಾತ್ರಿಯಾದೊಡನೆ ದೀಪಗಳ ಬೆಳಕಿನಿಂದ ಪ್ರತಿಕೃತಿಗಳು ಜಗಮಗಿಸುವಂತೆ ಮಾಡುತ್ತಾರೆ.








ಸಿಂಹ ಮತ್ತು ಡ್ರ್ಯಾಗನ್ ನೃತ್ಯ







**ಹೊಸ ವರ್ಷದ ಹಬ್ಬದ ಆಚರಣೆಯಲ್ಲಿನ ಕೆಲವು ಶುಭ-ಅಶುಭಗಳು:**

**ಶುಭ:**

ಚಕ್ಕೋತದ ಎಲೆಯನ್ನು ಸೇರಿಸಿ ಕಾಯಿಸಿದ ನೀರಿನಲ್ಲಿ ಸ್ನಾನ ಮಾಡುವಿಕೆ

ಮೀನಿನ ಸೇವನೆ

ಸಿಹಿ ತಿಂಡಿಯ ಸೇವನೆ

ಹಬ್ಬದ ಮುನ್ನಾ ದಿನ ಗೃಹವನ್ನು ಸಂಪೂರ್ಣವಾಗಿ ಶುಚಿಗೊಳಿಸುವುದು

ಹಬ್ಬ ಆಚರಣೆಯ ದಿನ ಕಿಟಕಿ ಮತ್ತು ಬಾಗಿಲುಗಳನ್ನು ಪೂರ್ಣ ತೆರೆದಿಡುವುದು

**ಅಶುಭ:**

ಹಬ್ಬದ ದಿನ ಕಸ ಗುಡಿಸುವುದು

ಪಾದರಕ್ಷೆಗಳ ಖರೀದಿ

ಕ್ಷೌರ ಮಾಡಿಸಿಕೊಳ್ಳುವುದು

ಸಾವಿನ ಬಗ್ಗೆ ಸಂಭಾಷಣೆ

ಕಪ್ಪು-ಬಿಳುಪು ಉಡುಗೆ ತೊಡುವುದು

ಮಕ್ಕಳ ಅಳುವಿಕೆ

ಹೆಣ್ಣು ಮಕ್ಕಳು ಮನೆಯಿಂದ ಹೊರಗೆ ಹೋಗಬಾರದು

ವಸ್ತುಗಳು ಒಡೆದು ಹೋದರೆ

ಆಸ್ಪತ್ರೆಯ ಭೇಟಿ

ಮಗಳು ಗಂಡನ ಮನೆಯಲ್ಲಿ ಹಬ್ಬ ಆಚರಿಸದೆ ತೌರಿಗೆ ಬಂದರೆ

**ವಿವಾಹ:**

ವಿವಾಹ ಮಹೋತ್ಸವದ ಆಚರಣೆ ಅಂದು:

ಪ್ರಾಚೀನ ಹೇಳಿಕೆ ಹಾಗೂ ನಡವಳಿಕೆಯಂತೆ ವಿವಾಹ ಜರುಗಲು ಅನುಸರಿಸಬೇಕಾಗಿದ್ದ ಮಂತ್ರ... ಮೂರು ಪತ್ರ ಮತ್ತು ಆರು ಸೂತ್ರ!

**ಮೂರು ಪತ್ರಗಳು:**

ಮೊದಲನೆಯ ಪತ್ರ - ವರನ ಮನೆಯವರಿಂದ ವಧುವಿನ ಮನೆಯವರಿಗೆ ಸಂಬಂಧ ಬೆಳೆಸುವ ಬಗ್ಗೆ ಪ್ರಸ್ತಾಪ

ಎರಡನೆಯ ಪತ್ರ - ವರನ ಮನೆಯವರು ವಧುವಿನ ಮನೆಯವರಿಗೆ ಕೊಡಮಾಡುವ ಉಡುಗೊರೆಗಳ ವಿವರವಾದ ಪಟ್ಟಿ, ಸಂಖ್ಯೆ ಹಾಗೂ ಬೆಲೆಯೊಂದಿಗೆ

ಮೂರನೆಯ ಪತ್ರ - ಮದುವೆಯ ದಿನದಂದು ವರನ ಕಡೆಯವರು ವಧುವಿನ ಮನೆಯವರಿಗೆ ವಧುವನ್ನು ತಮ್ಮ ಮನೆ ತುಂಬಿಸಿಕೊಳ್ಳುತ್ತಿರುವುದನ್ನು ಪ್ರಮಾಣೀಕರಿಸಲು ತಲುಪಿಸುವ ವಿವಾಹದ ದಾಖಲೆ ಪತ್ರ

**ಆರು ಸೂತ್ರಗಳು:**

೧. ವರನ ಪೋಷಕರು ಸಂಬಂಧ ಕುದುರಿಸುವ ಮಧ್ಯಸ್ತರ ಮುಖೇನಾ ವಧುಗಳ ಅನ್ವೇಷಣೆ

೨. ಒಪ್ಪಿಗೆ ಎನಿಸಬಹುದಾದ ವಧುಗಳ ಜನ್ಮದಿನಕ್ಕನುಸಾರವಾಗಿ ಸಿದ್ಧ ಪಡಿಸಿದ ಜಾತಕಗಳನ್ನು ವರನ ಜಾತಕದೊಡನೆ ತಾಳೆ ಹಾಕಲು ಪುರೋಹಿತರ ಸಹಾಯ ಪಡೆಯುವುದು.

೩. ಪುರೋಹಿತರ ಲೆಕ್ಕಾಚಾರದಂತೆ ಯಾವ ವಧುವಿನ ಜಾತಕ ವರನ ಜಾತಕದೊಡನೆ ತಾಳೆ ಹೊಂದಿ ಎಲ್ಲಾ ಶುಭ ಎನಿಸಿ ಎರಡೂ ಕುಟುಂಬಗಳಿಗೆ ಒಳಿತಾಗುವುದೆಂದರೆ ಆ ವಧುವಿನ ಪೋಷಕರಿಗೆ ಸಂಬಂಧ ಬೆಳೆಸುವ ಬಗ್ಗೆ ಪ್ರಸ್ತಾಪ ಹಾಗೂ ಉಡುಗೊರೆಗಳ ವಿವರವಾದ ಪಟ್ಟಿಯನ್ನು ಮಧ್ಯಸ್ತರ ಮೂಲಕ ರವಾನೆ.

೪. ವಧುವಿನ ಪೋಷಕರಿಂದ ಒಪ್ಪಿಗೆ ಬಂದರೆ, ಕೂಡಲೇ ಉಡುಗೊರೆಗಳ ಪಟ್ಟಿಯಲ್ಲಿ ನಮೂದಿಸಿದ್ದಂತೆ ಎಲ್ಲಾ ಪದಾರ್ಥಗಳನ್ನು ವಧುವಿನ ಮನೆಗೆ ತಲುಪಿಸುವುದರ ಮೂಲ ಉದ್ದೇಶ, ಒಪ್ಪಿಗೆಗಾಗಿ ತಮ್ಮ ಗೌರವವನ್ನು ತೋರ್ಪಡಿಸುವುದಲ್ಲದೇ ವಧುವನ್ನು ಸುಖವಾಗಿ ನೋಡಿಕೊಳ್ಳುವೆವೆಂಬ ಭರವಸೆಯನ್ನು ಮೂಡಿಸುವುದು.

೫. ಮುಂದೆ ಪುರೋಹಿತರ ಸಹಾಯದೊಂದಿಗೆ ಮದುವೆಯ ಕಾರ್ಯಕ್ರಮದ ದಿನಾಂಕದ ನಿಶ್ಚಯವಾದ ಮೇಲೆ ಎರಡೂ ಕುಟುಂಬಗಳು ತಮ್ಮ ಬಂಧು-ಮಿತ್ರರಿಗೆ ಸಿಹಿಯೊಂದಿಗೆ ಆಮಂತ್ರಣ ಪತ್ರದ ಹಂಚುವಿಕೆ.

೬. ಮದುವೆಯ ಕಾರ್ಯಕ್ರಮ.

ಮದುವೆಯ ಸಮಾರಂಭದ ದಿನ ವರನ ಮನೆಯಿಂದ, ಸಂಪೂರ್ಣ ಕೆಂಪು ಉಡುಗೆ ಹಾಗೂ ಒಡವೆಯನ್ನು ತೊಟ್ಟು ಜೊತೆಯಲ್ಲಿ ಸಣ್ಣ ಹುಡುಗನೊಂದಿಗೆ, ತನ್ನ ದಾಂಪತ್ಯದಲ್ಲೂ ವಂಶೋದ್ಧಾರನ ಜನನವಾಗಲಿ ಎಂಬ ಬಯಕೆಯಿಂದಿರುವ ವರನ ಮುಂದಾಳತ್ವದಲ್ಲಿ ಬಂಧು-ಮಿತ್ರರೊಡಗೂಡಿ ಹೊರಡುವ ಮದುವೆ ದಿಬ್ಬಣವು ಮಂಗಳಕರವಾದ ತಾಳ ಮೇಳಗಳನ್ನು ನುಡಿಸುವುದಲ್ಲದೇ ಪಟಾಕಿಯನ್ನು ದಾರಿಯುದ್ದಕ್ಕೂ ಸಿಡಿಸಿಕೊಂಡು ವಧುವನ್ನು ಕರೆತರಲು ಢೋಲಿಯೊಂದಿಗೆ ವಧುವಿನ ಮನೆಯನ್ನು ತಲುಪಿದರೆ, ವಧುವಿನ ಮನೆಯ ಹೆಬ್ಬಾಗಿಲಿನಲ್ಲಿ ವರನನ್ನು ತಡೆದು ಮಾಡುವ ಕೀಟಲೆ ಹಾಗೂ ಪ್ರಶ್ನಾವಳಿಯ ಭರಾಟೆಯನ್ನು ಸಂಭಾಳಿಸಿ ಉಡುಗೊರೆಯ ವಿನಿಮಯವಾದ ಮೇಲೆ, ಶಾಸ್ತ್ರೋಕ್ತವಾಗಿ ಮದುವೆಯ ಸಲುವಾಗಿ ತವರಿನಲ್ಲಿ ನಿರ್ವಹಿಸಬೇಕಾದ ಪೂಜೆಯನ್ನು ಪೂರ್ಣಗೊಳಿಸಿದ ವಧುವಿನ ಮುಖ ಚಹರೆ ಯಾರಿಗೂ ಕಾಣದಂತೆ ಸಂಪೂರ್ಣ ಕೆಂಪು ಬಣ್ಣದ ಉಡುಗೆ ತೊಡುಗೆಯಿಂದ ಹಾಗೂ ಒಡವೆಗಳಿಂದ ಅಲಂಕೃತಳಾಗಿರುವವಳನ್ನು ಆಕೆಯ ಪೋಷಕರ ಅನುಮತಿ ಪಡೆದ ವರನು ತನ್ನ ಬೆನ್ನ ಮೇಲೆ ವಧುವನ್ನು ಹೊತ್ತುಕೊಂಡು ಮನೆಯಿಂದ ಹೊರಗೆ ಕಾಲಿಡುವ ಮುನ್ನಾ ವಧುವು ಕಡ್ಡಾಯವಾಗಿ ತನ್ನ ತಾಯಿಯೊಂದಿಗೆ ಸಾಕಷ್ಟು ಅತ್ತು ಮುಗಿಸಿದ ಮೇಲೆ ಢೋಲಿಯಲ್ಲಿ ಸಾವಕಾಶವಾಗಿ ಕುಳ್ಳಿರಿಸಿ ಢೋಲಿಯ ಹೊರ ಭಾಗವನ್ನು ಸಂಪೂರ್ಣ ಕೆಂಪು ಬಣ್ಣದ ಬಟ್ಟೆಗೆ ಚಿತ್ತಾರಗಳಿಂದ ಅಲಂಕರಿಸಿರಿ ತಯಾರಿಸಿದ ತೆರೆಯಿಂದ ಮುಚ್ಚುವುದರ ಉದ್ದೇಶ, ಯಾವುದೇ ಅನಿಷ್ಟ ಆಕೆಯ ಕಣ್ಣಿಗೆ ಬೀಳದಿರಿಲಿ ಎಂಬುದು. ನಂತರ ವಧುವಿನ ಪೋಷಕರನ್ನು ಹೊರತು ಪಡಿಸಿ ಮಿಕ್ಕೆಲ್ಲಾ ಬಂಧು-ಮಿತ್ರರೊಡನೆ ವರನ ಮನೆಗೆ ದಿಬ್ಬಣದೊಂದಿಗೆ ತೆರಳುತ್ತಾರೆ.

ಮದುವೆಯ ಕಾರ್ಯಕ್ರಮವು ವರನ ಗೃಹದಲ್ಲಿನ ನಡುಮನೆಯಲ್ಲಿ ಸಿದ್ಧಗೊಂಡ ನಿಗದಿತ ಸ್ಥಳದಲ್ಲಿ ಪುರೋಹಿತರ ಸಾರಥ್ಯದಲ್ಲಿ ಶಾಸ್ತ್ರೋಕ್ತವಾಗಿ ನೆರವೇರಿದ ಮೇಲೆ ದಂಪತಿಗಳನ್ನು ದೇವರ ಕೋಣೆಗೆ ಕರೆದೋಯ್ದು ಸ್ವರ್ಗದ ಹಾಗೂ ಪೃಥ್ವಿಯ ದೇವತೆಗಳಿಗೆ ಪೂಜೆ ಸಲ್ಲಿಸಿದ ನಂತರ ನವ ವಧೂ-ವರರು ವರನ ಪೋಷಕರು ಮತ್ತು ಆಗಮಿಸಿರುವ ಹಿರಿಯರಿಗೆಲ್ಲಾ ವಂದಿಸಿ ತಮ್ಮ ದಾಂಪತ್ಯ ಜೀವನವು ಸುಖಮಯವಾಗಿರಲೆಂದು ಆಶೀರ್ವಾದ ಪಡೆಯುವರು. ನಂತರ ವಧೂ-ವರರು ಎದುರುಬದಿರು ನಿಂತು ತಮ್ಮ ಬಲಗೈಯಲ್ಲಿ ವೈನ್ ಲೋಟವನ್ನು ಹಿಡಿದುಕೊಂಡು ಇಬ್ಬರ ಕೈಗಳು ಒಂದಕ್ಕೊಂದು ಬಳಸುವಂತೆ ಬೆಸೆದು ಒಂದು ಗುಟುಕು ಕುಡಿದು ಕೈಗಳನ್ನು ಬಿಡಿಸಿಕೊಂಡು ಲೋಟಗಳನ್ನು ಬದಲಾಯಿಸಿಕೊಂಡು ಅದರಲ್ಲಿರುವ ಎಲ್ಲಾ ವೈನ್ ಅನ್ನು ಕುಡಿದು ಬರಿದು ಮಾಡುವರು. ಮುಂದುವರೆದು ಸಮಾರಂಭಕ್ಕೆ ಬಂದವರೆಲ್ಲರೊಡನೆ "ಟೋಸ್" ಮಾಡುವುದರ ಮೂಲಕ ಅವರಿಗೆಲ್ಲಾ ಕಾರ್ಯಕ್ರಮಕ್ಕೆ ಆಗಮಿಸಿದ್ದಕ್ಕೆ ಧನ್ಯವಾದಗಳನ್ನು ಸಲ್ಲಿಸುವರು. ನಂತರ ಆರಂಭವಾಗುವುದೇ ಪುಷ್ಕಳವಾದ ಭೋಜನ!

ಭೋಜನ ಸಮಯದಲ್ಲಿ ನವ ವಧೂ-ವರರೊಡನೆ ಹತ್ತಿರದ ಸಂಬಂಧೀಕರು ಹಾಗೂ ಸ್ನೇಹಿತರು ಹಾಸ್ಯದ ಹೊನಲನ್ನು ಹರಿಸುತ್ತಾ ಅವರನ್ನು ಛೇಡಿಸುವ ಹಾಗೂ ಪೀಡಿಸುವ ಪ್ರಕ್ರಿಯೆಯು ವಧೂ-ವರರ ಮಲಗುವ ಕೋಣೆಗೂ ತಲುಪುವ ಉದ್ದೇಶ ಅಲ್ಲಿಯವರೆಗೂ ಒಬ್ಬರನ್ನೊಬ್ಬರು ನೋಡಿ ಮಾತನಾಡಿ ಪರಿಚಯವಿಲ್ಲದಿರುವುದರಿಂದ ವಧೂ-ವರರ ನಡುವೆ ಇರುವ ಭಯ, ಬಿಗುಮಾನ ಮತ್ತು ನಾಚಿಕೆ ದೂರ ಸರಿದು ಅವರಿಬ್ಬರ ನಡುವಿನ ಸಂಬಂಧ ತಿಳಿಯಾಗಲಿ ಎಂಬುದೇ.
ಮದುವೆಯಾದ ಮಾರನೆ ದಿನ ವಧುವು ವರನ ಮನೆಯವರು ಏಳುವುದಕ್ಕೂ ಮುನ್ನಾ ಎದ್ದು ಎಲ್ಲರಿಗೂ ಅಡುಗೆ ತಯಾರಿಸಿ ತನ್ನ ಕೈಚಳಕವನ್ನು ಸಾಬೀತುಪಡಿಸಬೇಕು. ನಂತರ ವಿವಾಹವಾದ ಮೂರನೇ ದಿನ ವಧುವಿನ ತವರಿಗೆ ನವದಂಪತಿಗಳು ಬಂಧು-ಮಿತ್ರರೊಡನೆ, ಉಡುಗೊರೆಗಳೊಂದಿಗೆ ತೆರಳಿ ಪೋಷಕರ ಆಶೀರ್ವಾದ ಪಡೆದು ಎಲ್ಲರೊಂದಿಗೆ ಅವರು ನೀಡುವ ಭೋಜನದ ಆತಿಥ್ಯವನ್ನು ಸ್ವೀಕರಿಸುವರು.

ಯಾವುದೇ ಸಂಸ್ಕೃತಿ, ರೀತಿ, ನೀತಿ ಮತ್ತು ನಿಯಮಗಳು ಕಾಲಕ್ರಮೇಣ ಬದಲಾವಣೆಯೆಂಬ ಪ್ರಕೃತಿದತ್ತವಾದ ಸುಳಿಗೆ ಸಿಲುಕಿದಾಗ ಆಗುವ ಮಾರ್ಪಾಟಿನಂತೆ, ವೈವಾಹಿಕ ಜೀವನದ ಪ್ರಾಥಮಿಕ ಹಾಗೂ ಕಡ್ಡಾಯ ಅಂಶಗಳಾದ ಎರಡು ಜೀವಗಳ ಬೆಸುಗೆಯೊಂದಿಗೆ ಎರಡು ಕುಟುಂಬಗಳ ನಂಟಿನ ಬೆಳವಣಿಗೆ ಮತ್ತು ಮನುಕುಲದ ವರ್ಧನೆಯನ್ನು ಮಾತ್ರ ಉಳಿಸಿಕೊಂಡು ಮಿಕ್ಕೆಲ್ಲಾ ಆಚಾರ ವಿಚಾರಗಳು ಪಾಶ್ಚಿಮಾತ್ಯ ಸಂಸ್ಕೃತಿಯ ಗಾಳಿಗೆ ತಮ್ಮನ್ನು ಒಗ್ಗಿಸಿಕೊಂಡಿದ್ದರ ಪರಿಣಾಮ;

**ವಿವಾಹ ಮಹೋತ್ಸವದ ಆಚರಣೆ ಇಂದು:**

ಪ್ರಸ್ತುತ, ಕಾನೂನಿನಂತೆ ಇಪ್ಪತ್ತು ವರ್ಷ ತುಂಬಿದ ಹುಡುಗಿ ಹಾಗೂ ಇಪ್ಪತ್ತೆರಡು ವರ್ಷ ತುಂಬಿದ ಹುಡುಗರು ಮದುವೆ ಮಾಡಿಕೊಳ್ಳಲು ಅರ್ಹರು. ಹಾಗಾಗಿ, ಯುವಕ ಯುವತಿಯರು ತಮ್ಮ ಭಾವಿ ಬಾಳ ಸಂಗಾತಿಗಳನ್ನು ಪೋಷಕರ ಸಹಾಯವಿಲ್ಲದೇ ಹುಡುಕಿಕೊಳ್ಳುವ ಪ್ರಕ್ರಿಯೆ ಸ್ನೇಹದಿಂದ ಆರಂಭವಾಗಿ ಸಲುಗೆ ನಂತರ ಪ್ರೀತಿಯಾಗಿ ಪರಿವರ್ತನೆಗೊಂಡು ತಾವು ಆದರ್ಶ ದಂಪತಿಗಳಾಗಬಹುದು ಎಂಬ ಅನಿಸಿಕೆ ಬಂದ ಮೇಲೆ ಒಟ್ಟಿಗೆ ಒಂದೇ ಮನೆಯಲ್ಲಿ ವಾಸಿಸುವುದಕ್ಕಾರಂಭಿಸಿ ಮುಂದೆ ಮದುವೆ, ಮನೆ ಮತ್ತು ಸಂಸಾರಕ್ಕೆ ಅವಶ್ಯಕವೆಂದು ಜಂಟೀ ಹೆಸರಿನ ಖಾತೆಯಲ್ಲಿ ಹಣವನ್ನು ಬ್ಯಾಂಕಿನಲ್ಲಿ ಕೂಡಿಸುತ್ತಾ ಯುವತಿಯ ಬಿಗಿ ಹಿಡಿತದಲ್ಲಿ ಖರ್ಚು ವೆಚ್ಚವನ್ನು ಪೂರೈಸುತ್ತಾ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಾ ಒಂದು ವರ್ಷದಿಂದ ಹಿಡಿದು ಹತ್ತು ವರ್ಷಗಳವರೆಗೆ ಜೀವನ ತಳ್ಳಿ ಮಾನಸಿಕವಾಗಿ ಮತ್ತು ಆರ್ಥಿಕವಾಗಿ ಮದುವೆಯ ಹೊರೆಯನ್ನು ಹೊರಲು ಇಬ್ಬರೂ ಸಮರ್ಥರು ಎನಿಸತೊಡಗಿದಾಗ ಕಾನೂನಿನ ಪ್ರಕಾರ ಮದುವೆಯ ನೋಂದಣಿಯನ್ನು ಮಾಡಿಸಿಕೊಂಡು ನಂತರ ಬಂಧು-ಮಿತ್ರರೊಡನೆ ಮದುವೆಯ ಸಮಾರಂಭದ ಕಾರ್ಯಕ್ರಮದ ದಿನದ ಬಗ್ಗೆ ತಿಳಿಸುತ್ತಾರೆ.
ಇದರ ಮಧ್ಯೆ ಏನಾದರೂ ಇಬ್ಬರ ನಡುವೆ ಸಾಮರಸ್ಯದ ಕೊರತೆ ಕಂಡು ಬಂದರೆ, ಸಂಬಂಧವನ್ನು ಅಲ್ಲಿಗೇ ಕಡಿದು, ಮತ್ತೆ ಮರಳಿ ಯತ್ನದ ಚಕ್ರಕ್ಕೆ ತಮ್ಮನ್ನು ಸಿಲುಕಿಸಿಕೊಳ್ಳುತ್ತಾರೆ.

ಮದುವೆಯ ಸಮಾರಂಭದ ದಿನವನ್ನು ಪ್ರಕಟಿಸುವ ಕೆಲವು ವಾರಗಳ ಮುನ್ನಾ ಒಂದು ದಿನದಿಂದ ಹಿಡಿದು ಮೂರು ದಿನದವರೆಗಿನ ಮದುವೆ ಛಾಯಗ್ರಹಣದ ಕಾರ್ಯಕ್ರಮವಿರುತ್ತದೆ. ವಿವಿಧ ಉಡುಗೆ ತೊಡುಗೆ ಹಾಗೂ ವಿವಿಧ ಸ್ಥಳಗಳಲ್ಲಿ ವೈವಿಧ್ಯಮಯವಾದ ಭಾವ ಭಂಗಿಗಳಲ್ಲಿ ಸ್ಥಿರ ಛಾಯಾಚಿತ್ರೀಕರಣವನ್ನು ಪೂರೈಸಿ ಮದುವೆಯ ಸಮಾರಂಭದ ಕಾರ್ಯಕ್ರಮದಲ್ಲಿ ತೆರೆಯ ಮೇಲೆ ಪ್ರದರ್ಶಿಸುತ್ತಾ ಆಹ್ವಾನಿತರೆಲ್ಲರೊಡನೆ ಹಂಚಿಕೊಳ್ಳುತ್ತಾರೆ.
ಈಗಿನ ಮದುವೆ ದಿಬ್ಬಣವೆಂದರೆ, ವಧೂ-ವರರ ಆರ್ಥಿಕ ಸ್ಥಿತಿಯನ್ನವಲಂಬಿಸಿ ಹೂಗಳಿಂದ ಅಲಂಕೃತಗೊಂಡಿರುವ ಮೂರರಿಂದ ಎಂಟು ಕಪ್ಪು ಕಾರುಗಳಲ್ಲಿ ವರನ ಮನೆಯಿಂದ ಸೂಟುಧಾರಿಯಾದ ವರನು ಬಂಧು-ಮಿತ್ರರೊಂದಿಗೆ ಹೊರಟು ವಧುವಿನ ಮನೆಯನ್ನು ತಲುಪಿ ಮನೆಯ ಬಾಗಿಲಿನಲ್ಲಿ ಅಡ್ಡಗಟ್ಟುವ ಬಂಧು-ಮಿತ್ರರ ಛೇಡಿಸುವಿಕೆ ಹಾಗೂ ಉಡುಗೊರೆಗಳ ವಿನಿಮಯದೊಡನೆ ಪಾಶ್ಚಾತ್ಯ ಶೈಲಿಯಲ್ಲಿ ಬಿಳಿಯ ಗೌನನ್ನು ತೊಟ್ಟು ಅಲಂಕೃತಳಾದ ವಧುವನ್ನು ಸ್ವಲ್ಪ ದೂರ ವರನು ತನ್ನ ಬೆನ್ನ ಮೇಲೆ ಹೊತ್ತು ಕಾರಿನ ತನಕ ಬಂದು ಆಕೆಯೊಂದಿಗೆ ಕಾರಿನಲ್ಲಿ ಕುಳಿತು ವರನ ಗೃಹಕ್ಕೆ ಹಿಂದಿರುಗುತ್ತಾರೆ. ಬಹಳ ಸಮೀಪದ ಬಳಗದವರೊಡನೆ ಮದುವೆಯ ಶಾಸ್ತ್ರವನ್ನು ಮುಗಿಸಿ ಸಂಜೆಯ ಔತಣಕೂಟಕ್ಕೆ ಸಿದ್ದರಾಗುತ್ತಾರೆ.

ಸಾಮಾನ್ಯವಾಗಿ ಔತಣಕೂಟಗಳು ಯಾವುದಾದರು ಹೋಟೆಲ್‌ನಲ್ಲಿ ನೆರವೇರುತ್ತದೆ. ನಿಗದಿತ ಸಮಯಕ್ಕೆ ಮುಂಚಿತವಾಗಿ ವಧೂ-ವರರು ತಮ್ಮ ಆಪ್ತರೊಡನೆ ಹೋಟೆಲ್‌ನ ಮುಂಭಾಗದಲ್ಲಿ ಸಿದ್ಧಪಡಿಸಿರುವ ಸ್ವಾಗತ ವೇದಿಕೆಯ ಬಳಿ ನಿಂತು ಆಹ್ವಾನಿತರನ್ನು ಸ್ವಾಗತಿಸಿ ಅವರಿಂದ ಶುಭಾಶಯ ಹಾಗೂ ಕೆಂಪು ಲಕೋಟೆಯನ್ನು ಸ್ವೀಕರಿಸುತ್ತಾರೆ. ಆಹ್ವಾನಿತರೆಲ್ಲರೂ ಬಂದಿದ್ದಾರೆ ಎನ್ನುವ ಸೂಚನೆ ಹಾಗು ಸಮಯದ ಗಡುವನ್ನು ಮೀರಬಾರದೆಂಬ ಆಶಯದೊಂದಿಗೆ, ಐವತ್ತರಿಂದ ನೂರೈವತ್ತು ಆಹ್ವಾನಿತರು ಉಪಸ್ಥಿತರಿರುವ ಹಜಾರದಲ್ಲಿ ಅವರುಗಳ ನಡುವೆ ಮಬ್ಬುಗತ್ತಲಿನ ವಾತಾವರಣದಲ್ಲಿ ಸಾವಕಾಶವಾಗಿ ಆಗಮಿಸುವ ವಧೂ-ವರರು ವೇದಿಕೆಯನ್ನು ತಲುಪಿದ ಕೂಡಲೇ ಹಜಾರದ ಎಲ್ಲಾ ದೀಪಗಳನ್ನು ಪ್ರಖರವಾಗುವಂತೆ ಮಾಡುತ್ತಾರೆ. ನಂತರ ಎಲ್ಲರೆದುರು ಮದುವೆಯ ಉಂಗುರಗಳನ್ನು ವಧು-ವರರು ಪರಸ್ಪರ ತೊಡಿಸಿಕೊಳ್ಳುತ್ತಾರೆ. ಔತಣಕೂಟದಲ್ಲಿ ಇಡೀ ಕಾರ್ಯಕ್ರಮವನ್ನು ನಡೆಸಿಕೊಡಲು ಅನುಭವಿಯಾದ ವ್ಯಕ್ತಿಯ ಸಾರಥ್ಯವಿರುತ್ತದೆ. ಆತನು ಎಲ್ಲರ ಗಮನ ಸೆಳೆಯಲು ವಿವಿಧ ವಿನೋದಾವಳಿ ಕಾರ್ಯಕ್ರಮವನ್ನು ಆಯೋಜಿಸಿ ರಂಜಿಸುತ್ತಾನೆ. ಕಾರ್ಯಕ್ರಮದ ಉದ್ದಕ್ಕೂ ಆಹ್ವಾನಿತರಿಗೆಲ್ಲಾ ಆಹಾರದ ಸರಬರಾಜು ನಡೆಯುತ್ತಿರುತ್ತದೆ. ವಧೂ-ವರರು ಪ್ರತೀ ಆಹ್ವಾನಿತರೊಡನೆ ವೈನ್ ಲೋಟದೊಂದಿಗೆ "ಟೋಸ್" ಮಾಡಿ ಕಾರ್ಯಕ್ರಮಕ್ಕೆ ಆಗಮಿಸಿದ್ದಕ್ಕೆ ತಮ್ಮ ಧನ್ಯವಾದಗಳನ್ನು ಅರ್ಪಿಸುತ್ತಾರೆ. ಭೋಜನ ಮುಗಿದು ಆಹ್ವಾನಿತರೆಲ್ಲಾ ತೆರಳಿದ ಬಳಿಕ ವಧೂ-ವರರ ಆರ್ಥಿಕ ಸ್ಥಿತಿಯನ್ನವಲಂಬಿಸಿ ಅವರ ಮೊದಲ ರಾತ್ರಿ ಕಾರ್ಯಕ್ರಮವು ವರನ ಸ್ವಗೃಹದಲ್ಲೋ ಇಲ್ಲಾ ಹೋಟೆಲ್‌ನಲ್ಲೋ ನೆರವೇರುತ್ತದೆ.

**ವಿವಾಹ ವಿಚ್ಛೇದನ:**

ಅನಾದಿ ಕಾಲದಲ್ಲಿ ವಿಚ್ಛೇದನವೆಂಬುದು ಚೀನಾದಲ್ಲಿ ಸಾಮಾಜಿಕವಾಗಿ ಅತೀ ಅವಮಾನಕಾರಿಯಾದ ಘಟನೆ ಎಂದು ಪರಿಗಣಿಸಲಾಗುತ್ತಿತ್ತು. ಮಕ್ಕಳಾಗಲಿಲ್ಲ ಅಥವಾ ಬುದ್ಧಿಮಾಂಧ್ಯ ಎಂಬ ಪ್ರಮುಖ ಕಾರಣದೊಂದಿಗೆ ಪತಿಗೆ ಮಾತ್ರ ವಿಚ್ಛೇದಿಸುವ ಅಧಿಕಾರ ಇದ್ದರೂ ಸಮಾಜದ ರೀತಿ ನೀತಿ ಹಾಗೂ ಬುದ್ಧಿಮಾತುಗಳು ವಿಚ್ಛೇದನದ ಸಂಖ್ಯೆಯನ್ನು ಸಾಕಷ್ಟು ಸಂಕುಚಿತಗೊಳಿಸಿತ್ತು. ಪುರುಷ ಪ್ರಧಾನವಾದ ಸಮಾಜದಲ್ಲಿ ಕಾರಣವೇನೇ ಇದ್ದರೂ ವಿಚ್ಛೇದಿತ ಹೆಣ್ಣನ್ನು ಅತೀ ಕೀಳಾಗಿ ಕಾಣುತ್ತಿದ್ದುದ್ದಲ್ಲದೇ ಆಕೆಯನ್ನು "ಬಳಸಿದ ಎಕ್ಕಡ" ಎಂದು ಮೂದಲಿಸುತ್ತಿದ್ದರು.

ಮುಂದೆ, ಇಸವಿ ೧೯೪೯ ರಿಂದ ೨೦೦೩ ರವರೆಗೆ ಇದ್ದ ಕಾನೂನಿನಂತೆ, ವಿಚ್ಛೇದನ ಬಯಸುವ ದಂಪತಿಗಳು ತಾವು ವಾಸಿಸುವ ಸ್ಥಳದಲ್ಲಿನ ನೆರೆ ಹೊರೆಯವರ ಸಹಕಾರ ಸಂಘ ಅಥವಾ ತಮ್ಮ ಉದ್ಯೋಗದಾತರ ಅನುಮತಿ ಪಡೆಯಬೇಕಿತ್ತು. ಹಾಗಾಗಿ, ತಮ್ಮ ಸಂಸಾರದಲ್ಲಿದ್ದ ಒಡಕನ್ನು ಸುಲಭವಾಗಿ ಹೊರಗೆ ಹಂಚಿಕೊಳ್ಳಲಾಗದೇ ಒಳಗೊಳಗೇ ವೇದನೆಯನ್ನು ಅನುಭವಿಸಬೇಕಿತ್ತು. ನಂತರ, ಪಾಶ್ಚಿಮಾತ್ಯರ ಸಂಪರ್ಕದಿಂದ ಹಾಗೂ ತಾಂತ್ರಿಕತೆಯ ನಾಗಾಲೋಟದ ಬೆಳವಣಿಗೆಯಿಂದ ಚೀನಾದಲ್ಲಿನ ಸಮಾಜದಲ್ಲಿ ಉಂಟಾದ ಮಹತ್ವದ ಬದಲಾವಣೆ ಎಂದರೆ ಅಂದಿನ ಕಾಲದ ಪೋಷಕರ ಹಾಗೂ ಬಂಧುಗಳ ಮಾರ್ಗದರ್ಶನದಲ್ಲಿ ನೆರವೇರುತ್ತಿದ್ದ ವೈವಾಹಿಕ ಸಂಬಂಧಗಳು ಕ್ರಮೇಣ ನಶಿಸಿ ತಮ್ಮ ಬಾಳಸಂಗಾತಿಗಳನ್ನು ದೂರವಾಣಿ, ಅಂತರ್ಜಾಲ ಮತ್ತು ಸಾಮಾಜಿಕ ಜಾಲತಾಣಗಳ ಮುಖೇನ ಪಡೆಯುವಂತಾಯಿತು. ಹೀಗೆ ದೊರಕಿದ ಸಂಗಾತಿಗಳ ಮತ್ತು ಅವರ ಕುಟುಂಬದ ಬಗ್ಗೆ ದೊರಕುವ ಕನಿಷ್ಠ ಪೂರ್ವಾಪರ ಮಾಹಿತಿ ಮತ್ತು ಕೈಗೆಟುಕದ ಗಗನ ಕುಸುಮದಷ್ಟು ಎತ್ತರದ ಬಯಕೆಗಳು ಬೆಳೆದು ವಿಚ್ಛೇದನವು ಏನಂಥಾ ಅವಮಾನಕಾರಿಯಾದ ಘಟನೆ ಅಲ್ಲಾ ಎಂಬ ಭಾವನೆ ಮೂಡಿಸಲು ಶಕ್ತವಾಯಿತು! ಪ್ರಸ್ತುತ, ಊಟವಾಯಿತಾ? ನಿದ್ದೆಯಾಯಿತಾ? ಎಂಬ ಸಾಮಾನ್ಯ ಪ್ರಶ್ನೆಗಳಂತೆ ವಿಚ್ಛೇದನವಾಯಿತಾ? ಎನ್ನುವ ಹಂತಕ್ಕೆ ಏರಿದ್ದಾಗಿದೆ(?)

ಸಂಸಾರದಲ್ಲಿ ಸಿಹಿಗಿಂತ ಕಹಿ ಹೆಚ್ಚಾಗಿದೆ ಎಂದೆನಿಸಿದರೆ ಅಷ್ಟೇ ಸಾಕು ಅದನ್ನು ಸರಿಪಡಿಸುವ ಒಂದೇ ದಾರಿಯೆಂದರೆ ವಿಚ್ಛೇದನ ಎಂಬುವಷ್ಟರ ಮಟ್ಟಿಗೆ ದೃಢವಾಗಿ ಇಂದಿನ ಪೀಳಿಗೆಯ ಮನದಲ್ಲಿ ಬೆಳೆದು ನಿಂತಿರುವುದರ ಮುಖ್ಯ ಕಾರಣ ದಂಪತಿಯರ ನಡುವೆ ಪ್ರಮುಖವಾಗಿ ಇರಲೇಬೇಕಾದ ಪ್ರೀತಿ ಮತ್ತು ವಿಶ್ವಾಸಗಳಿಗೆ ಬದಲಾಗಿ ಹಣ, ಪದವಿ, ಸ್ವಾತಂತ್ರ್ಯ ಮತ್ತು ಹೆಸರು ಪ್ರಧಾನವೆನಿರುವುದರಿಂದ. ಕಾಲವನ್ನನುಸರಿಸಿ ಕ್ರಮೇಣ ಏರುಗತಿಯಲ್ಲಿ ಸಾಗುತ್ತಿರುವ ವಿಚ್ಛೇದನದ ಅಂಕಿ ಅಂಶಗಳ ಸಮಗ್ರ ಸಂಖ್ಯೆಯನ್ನು ಅವಲೋಕಿಸಿದರೆ ಪ್ರಸ್ತುತ ಪ್ರತೀ ಐದು ಮದುವೆಗಳಲ್ಲಿ ಒಂದು ವಿಚ್ಛೇದನ ಖಂಡಿತ! ಆಶ್ಚರ್ಯದ ವಿಚಾರವೆಂದರೆ, ಮಹಿಳೆಯರು ವಿಚ್ಛೇದನಕ್ಕೆ ಮುಂದಾಳತ್ವ ವಹಿಸುತ್ತಿರುವ ಪರಿ! ಅದೂ ಯಾವುದೇ ಅಳುಕಿಲ್ಲದೇ!
ಅಂದು ಕಷ್ಟವೋ ಸುಖವೋ, ನಾಲ್ಕು ಗೋಡೆಯೊಳಗಷ್ಟೇ ತನ್ನ ಜೀವನ ಎಂದು ಬದುಕುತ್ತಿದ್ದ ಮಹಿಳೆ ಇಂದು ತನಗೆ ದಕ್ಕಿದ ಸಾಮಾಜಿಕ ನೆಲೆಗಟ್ಟಿನಲ್ಲಿನ ಸಮಾನತೆ, ಆರ್ಥಿಕ ಸಬಲತೆ ಮತ್ತು ಸ್ವಾತಂತ್ರ್ಯದ ಪರಿಣಾಮವಾಗಿ ಆದಾಯ, ಪದವಿ, ನಿಷ್ಠೆಯ ಕೊರತೆ, ಅವಮಾನ, ಹಿಂಸೆ ಮತ್ತು ಮಾನಸಿಕವಾಗಿ ಕುಗ್ಗುವಿಕೆಯನ್ನು ಪುರುಷರೊಂದಿಗೆ ತನ್ನನ್ನು ತುಲನೆ ಮಾಡಿಕೊಂಡು ಸರಿಪಡಿಸುವ ಮಾರ್ಗವನ್ನು ಅರಸುವಲ್ಲಿ ವಿಫಲರಾಗಿ ವಿಚ್ಛೇದನವೊಂದೇ ಪರಿಹಾರ ಎಂಬ ನಿರ್ಧಾರಕ್ಕೆ ಬಂದಿರುವುದು. ಕಾರಣ ಏನೇ ಇರಲೀ ಕಾರಣಕರ್ತರು ಯಾರೇ ಇರಲೀ ವಿಚ್ಛೇದನದ ಅವಧಿಯಲ್ಲಿ ಉಂಟಾಗುವ ದಂಪತಿಗಳ ನಡುವಿನ ಜಿಗುಪ್ಸೆ ತಾವು ಹಿಂದೊಮ್ಮೆ ಒಬ್ಬರಿಗೊಬ್ಬರನ್ನು ಅರಿತುಕೊಳ್ಳುವ, ಅರಿತು ತಮ್ಮನ್ನೇ ಅರ್ಪಿಸಿಕೊಂಡು ಸವೆಸಿದ ದಾಂಪತ್ಯದ ಜೀವನಕ್ಕೆ ಯಾವುದೇ

ಅರ್ಥವಿಲ್ಲವೆಂಬ ಶೂನ್ಯ ಭಾವನೆ ಮತ್ತು ವಿಚ್ಛೇದನದ ತರುವಾಯ ಉಂಟಾಗುವ ಏಕಪೋಷಕತನದೊಂದಿಗೆ ವೃದ್ಧ ತಾಯಿ, ತಂದೆಯರ ಜವಾಬ್ದಾರಿ, ಮರು ಮದುವೆಯ ಪ್ರಯತ್ನದಲ್ಲಿ ಸಫಲತೆಯಾದರೆ ಎಲ್ಲಿಯವರೆಗೂ? ಇಲ್ಲಾ ವಿಫಲತೆಯೊಂದಿಗೆ ಅವಮಾನ, ಮಾನಸಿಕ ಕ್ಷೋಭೆ, ಆಸ್ತಿಯ ಹಂಚಿಕೆಯಲ್ಲಿನ ತಕರಾರುಗಳನ್ನು ಸರಿಪಡಿಸಲು ಕಾನೂನಿನ ಬೆನ್ನ ಹತ್ತುವುದು ಮುಂತಾಗಿ ನೇರವಾಗಿ ಮಕ್ಕಳ ಮೇಲೆ ಗಾಢವಾದ ಪರಿಣಾಮ ಬೀರಿ ಮುಂದಿನ ಪೀಳಿಗೆಯ ಭವಿಷ್ಯವು ಪ್ರಶ್ನಾರ್ಥಕವಾಗಿರುವುದು ವಾಸ್ತವ.

**ವೃದ್ಧ ದಾಂಪತ್ಯದಲ್ಲಿ ಬಿರುಕು:**

ಯುವ ದಂಪತಿಗಳ ಪರಿಸ್ಥಿತಿ ಇಂತಾದರೆ, ನಿವೃತ್ತಿ ಜೀವನ ಆರಂಭಿಸಿದ ಹತ್ತು ವರ್ಷದೊಳಗಿನ ಪ್ರಮುಖವಾಗಿ ನಗರದಲ್ಲಿ ವಾಸಿಸುವ ವೃದ್ಧ ದಂಪತಿಗಳಲ್ಲಿ ಶೇಕಡ ನಲವತ್ತರಷ್ಟು ಭಾಗ ವಿವಾಹ ವಿಚ್ಛೇದನಕ್ಕೆ ಅದರಲ್ಲೂ ಮಹಿಳೆಯರೇ ಮುಂದಾಗುತ್ತಿರುವದಕ್ಕೆ ಮುಖ್ಯ ಕಾರಣ ಆರ್ಥಿಕ ಸ್ಥಿತಿ ಹಾಗೂ ಪರಸ್ಪರ ಸಮನ್ವಯದ ಕೊರತೆ. ನೆರೆಹೊರೆಯವರ ಸಂಧಾನ ಹಾಗೂ ಮಕ್ಕಳ ಮಾತಿಗೆ ಯಾವುದೇ ಮಣೆ ಹಾಕದ ವೃದ್ಧ ದಂಪತಿಗಳು ತಮ್ಮ ಮುಂದಿನ ಬದುಕಿನ ಮಾರ್ಗದ ಬಗ್ಗೆ ಅತಂತ್ರರಾಗಿದ್ದಾರೆ.

**ಹೆಣ್ಣಿನ ಸ್ಥಾನಮಾನ:**

ಬೃಹತ್ ರಾಷ್ಟ್ರವಾದ ಚೀನಾದಲ್ಲಿನ ಹೆಣ್ಣಿನ ಸ್ಥಾನಮಾನವನ್ನು ಸಾರಾಸಗಟಾಗಿ ಹೀಗೇ ಎಂದು ಒಕ್ಕೊರಲಿನಲ್ಲಿ ಘೋಶಿಸಲು ಸಾಧ್ಯವಿಲ್ಲಾ! ಕಾರಣ ಆಕೆಯ ಸ್ಥಿತಿ ಗತಿಯು ಪ್ರಮುಖವಾಗಿ ನಿರ್ಧಾರವಾಗುವುದು ಆಕೆಯು ಶ್ರೀಮಂತಳೇ, ಬಡವಳೇ, ನಗರವಾಸಿಯೇ ಅಥವಾ ಹಳ್ಳಿಯಲ್ಲಿರುವವಳೇ ಎಂಬುವುದರಿಂದ!

ಅನಾದಿ ಕಾಲದಿಂದ ೧೯೪೯ ರ ವರೆಗೆ ಚೀನಾದಲ್ಲಿ ಸ್ತ್ರೀ ಎಂದರೆ ಸಮಾಜದಲ್ಲಿ ಹಾಗೂ ಸಂಸಾರದಲ್ಲಿ ಎರಡನೆಯ ಅಂದರೆ ಕಟ್ಟ ಕಡೆಯ ಸ್ಥಾನದಲ್ಲಿರುವವಳು. ಆಕೆಯು ತಂದೆ ತಾಯಿ, ಸಹೋದರರು, ಗಂಡ ಮತ್ತು ಮಕ್ಕಳ ಅಧೀನದಲ್ಲೇ ಇದ್ದು ಅವರಿಗೆಲ್ಲಾ ತನ್ನ ಶಕ್ತಿ ಮೀರಿ ಸೇವೆಮಾಡಿ ತನ್ನ ಜೀವನವನ್ನು ಸವೆಸಬೇಕಿತ್ತು. ಅತೀ ಶೋಚನೀಯ ಸ್ಥಿತಿ ಎಂದರೆ ಕೆಲ ಹೆಣ್ಣು ಮಕ್ಕಳಿಗೆ ಹೆಸರೇ ಇರದೇ ಅವರ ಮದುವೆಯ ಸಂದರ್ಭದಲ್ಲಿ ತಂದೆಯ ಮನೆತನದ ಹೆಸರಿನೊಂದಿಗೆ ಗಂಡನ ಮನೆಯನ್ನು ಸೇರಬೇಕಾಗಿತ್ತು! ವಿದ್ಯೆಗೆ ಅವಕಾಶವಿಲ್ಲದೇ ಏನಿದ್ದರೂ ಅಡುಗೆ ಮನೆಯ ಕೆಲಸ ಹಾಗೂ ಮಕ್ಕಳ ಲಾಲನೆ ಪಾಲನೆ ಗಳೊಂದಿಗೆ ಕರಕುಶಲ ಕೆಲಸಗಳಲ್ಲದೇ ಕುಲಕಸುಬಿನಲ್ಲಿ ಕಡ್ಡಾಯವಾಗಿ ನೆರವಾಗಲೇಬೇಕಾಗಿತ್ತು. ಆಕೆಗೆ ಯಾವುದೇ ರೀತಿಯ ಹಕ್ಕಿನ ಬಾಧ್ಯತೆ ಕಾನೂನಿನ ಪ್ರಕಾರವೂ ಇರಲಿಲ್ಲವಾದ್ದರಿಂದ ಆಸ್ತಿಯಲ್ಲಿನ ಪಾಲಾಗಲಿ ಅಥವಾ ಗಂಡನ ಕಿರಿಕುಳ ತಾಳಲಾರದೇ ವಿಚ್ಛೇದನ ಪಡೆಯಲೂ ಸಹ ಅವಳು ಅರ್ಹಳಲ್ಲ. ಪತಿಯೇನಾದರು ಅಕಾಲಮರಣಕ್ಕೀಡಾದರೆ ಸತಿಗೆ ಉಗ್ರವಾದ ಶಿಕ್ಷೆಯನ್ನು ನೀಡಲಾಗುತ್ತಿತ್ತು. ಕೆಲವೊಮ್ಮೆ ಶಿಕ್ಷೆಯು ಸಾವಿನಲ್ಲಿ ಪರ್ಯಾವಸಾನಗೊಳ್ಳುತ್ತಿತ್ತು. ಹೆಣ್ಣು ಮಕ್ಕಳನ್ನು ಹೆತ್ತರೆ, ಅದಕ್ಕೆ ಸ್ತ್ರೀಯರನ್ನು ಹೊಣೆ ಮಾಡಿ, ಆಕೆಗೆ ಗಂಡು ಮಗುವನ್ನು ಹೆರುವ ತಾಕತ್ತಿಲ್ಲವೆಂದು ಪರಿಗಣಿಸಿ, ಮೂರು ದಿನದ ಮಗುವನ್ನು ಮಂಚದ ಕೆಳಗೆ ಮಲಗಿಸಿ ಒಡೆದ ಮಡಿಕೆಯ ಚೂರುಗಳನ್ನು ಕೈಗಿತ್ತು ವಂಶದ ಪೂರ್ವಿಕರಿಗೆ ಪೂಜೆ ಸಲ್ಲಿಸಿ ಹುಟ್ಟಿದ ಹೆಣ್ಣು ಮಗುವು ಜೀವನವಿಡೀ ಜೀತದ ಸೇವೆಯನ್ನು ಮಾಡುವಳೆಂದು ಘೋಷಿಸಲಾಗುತ್ತಿತ್ತು. ಪ್ರಚಲಿತವಿದ್ದ ಹೇಳಿಕೆಯಂತೆ ತಾನು ಅನುಭವಿಸುತ್ತಿದ್ದ ಕಷ್ಟಗಳಿಗೆ ಮಹಿಳೆಗಿದ್ದ ಮೂರು ನಿವಾರಣ ಮಂತ್ರಗಳೆಂದರೆ ಅಳು, ವೇದನೆ ಮತ್ತು ಸಾವು.

ದೇಶಾದ್ಯಂತ ಸ್ತ್ರೀಯರೆಲ್ಲಾ ವಿದ್ಯೆಯಿಂದ ವಂಚಿತರಾದರೂ, ಹುನಾನ್ ಪ್ರಾಂತ್ಯದ ಹೆಣ್ಣು ಮಕ್ಕಳು, ತಮ್ಮದೇ ಆದ ಲಿಪಿಯನ್ನು ಅಭಿವೃದ್ಧಿಪಡಿಸಿ ತಮ್ಮ ಅನಿಸಿಕೆ, ಅಭಿಪ್ರಾಯಗಳನ್ನು ಪುರುಷರಿಂದ ಮರೆ ಮಾಚಿ ತಮ್ಮಗಳಲ್ಲೇ ಹಂಚಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ಅವರು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಬರೆಯಲು ಉಪಯೋಗಿಸುತ್ತಿದ್ದ ಮಾಧ್ಯಮ ತಮ್ಮ ಒಳ ಉಡುಪುಗಳು ಹಾಗೂ ಹೆಂಗಸರ ನಿಕಟ ವಸ್ತುಗಳು. ಹದಿಮೂರನೇ ಶತಮಾನದಲ್ಲಿ ಆರಂಭವಾಯಿತು ಎನ್ನಲಾದ ಈ ಗುಪ್ತ ಭಾಷೆಯು ಹೊರ ಪ್ರಪಂಚಕ್ಕೆ ಗೊತ್ತಾದದ್ದು ಐವತ್ತರ ದಶಕದಲ್ಲಿ! ಹುನಾನ್ ಪ್ರಾಂತ್ಯದ ಹೆಂಗಸರು ಒಮ್ಮೆ ದೇಶದ ಅಧ್ಯಕ್ಷರಾದ ಮಾವ್ ಝೀಡಾಂಗ್ ಅವರನ್ನು ಭೇಟಿ ಮಾಡಲು ಬಂದಾಗ, ಅವರು ಮಾತನಾಡುತ್ತಿದ್ದ ಭಾಷೆಯ ಕಡೆ ಗಮನ ಹರಿಸಿದ ವೃತ್ತ ಪತ್ರಿಕೆಯ ವಕ್ತಾರರಿಂದ ಯುನೆಸ್ಕೋ ತಲುಪಿ ಮುಂದೆ ಈ ಭಾಷೆಗೆ ಬೆಳಕು ಚೆಲ್ಲುವಂತಾಯಿತು.

ಹತ್ತನೇ ಶತಮಾನದಿಂದ ಆರಂಭಗೊಂಡು, ಇಪ್ಪತ್ತನೇ ಶತಮಾನದ ಆದಿಯವರೆಗೂ ಸಾಮಾನ್ಯ ಜನರ ಜೀವನದಲ್ಲಿ ಪ್ರಚಲಿತವಿದ್ದ ಹೆಣ್ಣಿನ ಪಾದಗಳ ಕಟ್ಟುವಿಕೆ! ಹೆಣ್ಣು ಮಕ್ಕಳು ಮೂರು ವರ್ಷದವರಿದ್ದಾಗ ಪಾದಗಳೆರಡರ ಮೂಳೆಗಳನ್ನು ಮುರಿದು, ಬೆರಳುಗಳನ್ನು ಮಡಚಿ ಬಟ್ಟೆಯಿಂದ ಭದ್ರವಾಗಿ ಕಟ್ಟಿ ಇಡೀ ಪಾದದ ಉದ್ದವು ಹೆಬ್ಬೆರಳಿನ ತುದಿಯಿಂದ ಹಿಮ್ಮಡಿಯವರೆಗೆ, ಆರು ಅಂಗುಲ ಮೀರದಂತೆ ಬೆಳವಣಿಗೆಯನ್ನು ನಿಯಂತ್ರಿಸಿ ಅಂಥಹ ಪಾದಗಳನ್ನು "ಕಮಲ ಪಾದ" ಎನ್ನುತ್ತಿದ್ದರು.



ಆರಂಭದಲ್ಲಿ ರಾಜಮನೆತನಗಳಲ್ಲಿ ಬಳಕೆಯಿದ್ದ ಪದ್ದತಿಯು ಕ್ರಮೇಣ ತಮ್ಮ ಪದವಿ ಮತ್ತು ಶ್ರೀಮಂತಿಕೆಯನ್ನು ಸಾಬೀತುಗೊಳಿಸಲು, ಅಧಿಕಾರಿಗಳು ಮತ್ತು ಶ್ರೀಮಂತ ಕುಟುಂಬದಲ್ಲಿನ ಗಂಡಸರು, ತಮ್ಮ ಪ್ರತಿಷ್ಠೆಯನ್ನು ತೋರ್ಪಡಿಸುತ್ತಿದ್ದ ಒಂದು ಸಾಧನವೆಂದರೆ, "ಕಮಲ ಪಾದ"ಗಳನ್ನು ಹೊಂದಿದ್ದ ತಮ್ಮ ಹೆಂಡತಿಯರು! ಮುಂದೆ, ಇದರಿಂದ ಪ್ರೇರಿತರಾದ ಜನಸಾಮಾನ್ಯರು "ಕಮಲ ಪಾದ"ಗಳನ್ನು ಬಯಸುವಂತಾಯಿತು!

೧೯೪೯ರಿಂದೀಚೆಗೆ ಸ್ತ್ರೀಯರಿಗೆ ಸಮಾಜದಲ್ಲಿ ಸಮಾನತೆ, ಶಿಕ್ಷಣ ಸೌಲಭ್ಯ, ತಮ್ಮ ಬಾಳಸಂಗಾತಿಗಳನ್ನು ಆರಿಸುವ/ತ್ಯಜಿಸುವ ಹಕ್ಕಿನೊಂದಿಗೆ ಆಸ್ತಿಯಲ್ಲಿ ಪಾಲುದಾರಿಕೆ ದೊರೆತಾಗಿದೆ.
ಅರವತ್ತರ ದಶಕದಲ್ಲಿ ಹೆಣ್ಣು ಮಕ್ಕಳನ್ನು ಹರಸಾಹಸ ಮಾಡಿ ಬಲವಂತವಾಗಿ ವೇತನಕ್ಕಾಗಿ ಮನೆಯಿಂದ ಹೊರಗೆ ಬಂದು ಕಾರ್ಖಾನೆ ಹಾಗೂ ಕಛೇರಿಗಳಲ್ಲಿ ದುಡಿಯುವಂತೆ ಮಾಡಲಾಯಿತು. ಪರಿಣಾಮ ಉತ್ಪಾದನೆಯಲ್ಲಿ ಪ್ರಗತಿ ಮತ್ತು ಗಂಡು ಹೆಣ್ಣಿನ ನಡುವಿನ ಹಕ್ಕಿನ ಸಮಾನತೆಯನ್ನು ಕಾಯ್ದುಕೊಳ್ಳುವ ನಿಟ್ಟಿನಲ್ಲಿ ಸರ್ಕಾರ ಸಾಧಿಸಿದ ಸಫಲತೆ! ಉತ್ಪಾದನ ಘಟಕಗಳಿಗಷ್ಟೇ ಸೀಮಿತವಾಗಿದ್ದ ಹೆಣ್ಣಿನ ಕಾಯಕವನ್ನು ಮುಂದೆ ಎಂಭತ್ತರ ದಶಕದಿಂದ ಎಲ್ಲಾ ಸೇವಾಕ್ಷೇತ್ರಕ್ಕೂ ಹಂತ ಹಂತವಾಗಿ ವಿಸ್ತರಿಸಿಕೊಂಡು ಬಂದುದ್ದರ ಪರಿಣಾಮವಾಗಿ ಬದಲಾದ ಪ್ರಸ್ತುತ ಚೀನಾದ ಪರಿಸ್ಥಿತಿಯಲ್ಲಿ ನಗರದಲ್ಲಿ ವಾಸಿಸುವ ಸ್ತ್ರೀಯರು ತಮ್ಮ ಶಕ್ತಿಗನುಸಾರವಾಗಿ ವಿದ್ಯಾಭ್ಯಾಸ ಮಾಡಿಕೊಂಡು ನೌಕರಿಯ ಹಾದಿಯಲ್ಲಿ ಉನ್ನತ ಪದವಿಗೇರುತ್ತಾ ಗಂಡಿನ ಅಡಿಯಾಳಾಗದೇ ಸಂಸಾರದಲ್ಲೂ ಹಾಗೂ ಸಾಮಾಜಿಕವಾಗಿಯೂ ಎಲ್ಲಾ ಕ್ಷೇತ್ರದಲ್ಲಿ ಹಾಸುಹೊಕ್ಕಾಗಿ ತನ್ನನ್ನು ತೊಡಗಿಸಿಕೊಂಡು ಉತ್ತಮವಾದ ಜೀವನ ಶೈಲಿಯನ್ನು ನಡೆಸುತ್ತಾ ಮುಖ್ಯ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಗಮನಾರ್ಹ ಪಾತ್ರವಹಿಸುತ್ತಾ, ಕೆಲವೊಮ್ಮೆ ಗಂಡಿಗಿಂತ ಉನ್ನತವಾದ ತೀರ್ಮಾನ ತೆಗೆದುಕೊಳ್ಳುವಲ್ಲಿ ಸಮರ್ಥಳಾಗಿದ್ದಾಳೆ. ಪತ್ನಿಯ, ತಾಯಿಯ, ಸೊಸೆಯ ಹಾಗೂ ನೌಕರಿಯ ಜವಾಬ್ದಾರಿಯನ್ನು ಸಮಾನವಾಗಿ ಪರಿಗಣಿಸಿ ನಿಭಾಯಿಸುವುದನ್ನು ಕಂಡ ಗಂಡುಗಳು ತಮ್ಮ ಅಹಂನ ಚೌಕಟ್ಟನಿಂದ ಬೇರೆ ವಿಧಿ ಇಲ್ಲದೇ ಹೊರ ಬಂದು ಹೆಣ್ಣಿನ ಎಲ್ಲಾ ಪಾತ್ರಗಳಲ್ಲಿ ತಮ್ಮದೇ ಆದ ಉಚಿತ ರೀತಿಯಲ್ಲಿ ಅನುಸರಿಸಿ ಹೆಗಲು ಕೊಡುತ್ತಿರುವುದು ಕಂಡು ಬರುತ್ತದೆ. ಹೆಚ್ಚಿನ ಕುಟುಂಬಗಳಲ್ಲಿ ಹಣಕಾಸಿನ ಮೇಲಿನ ಹಿಡಿತ ಮಹಿಳೆಯದೇ!
ಇನ್ನು ಹಳ್ಳಿಗಳಲ್ಲಿನ ದೃಶ್ಯವೇ ಬೇರೆ! ಅಂದಿನ ಕಾಲಕ್ಕೆ ಹೋಲಿಸಿದರೆ ಹೆಣ್ಣಿನ ಸ್ಥಿತಿ ಬದಲಾಗಿದ್ದರೂ ನಗರಗಳಲ್ಲಿನ ಹೆಂಗಳೆಯರಿಗೆ ಯಾವುದೇ ರೀತಿಯಲ್ಲೂ ಸಮಾನರಲ್ಲ. ಈಗಲೂ ಗಂಡಿನ ಆಶ್ರಯದಲ್ಲೇ ಹೆಚ್ಚಿನಾಂಶ ಬದುಕಬೇಕಾಗಿರುವುದು ವಾಸ್ತವ.

**ಚಾಪ್‌ಸ್ಟಿಕ್ಸ್:**



ಪ್ರಪಂಚದಲ್ಲೇ ಪ್ರಪ್ರಥಮವಾಗಿ ಚೀನಾದಲ್ಲಿ ಬಳಸಲು ಆರಂಭಿಸಿದ ಚಾಪ್‌ಸ್ಟಿಕ್ಸ್‌ನ ಮೂಲ ಹುಡುಕಲು ಹೊರಟರೆ ನಮಗೆ ಲಭ್ಯವಾಗುವ ಮಾಹಿತಿಗಳು ಮೂರು;
ಪ್ರಾಚೀನ ನಂಬಿಕೆಯಂತೆ, ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಶಾಂಗ್ ಮನೆತನಕ್ಕೆ ಸೇರಿದ ಝೌ ಎಂಬ ರಾಜನು ಸದಾ ಊಟ ತಿಂಡಿಯನ್ನು ಸೇವಿಸುವ ಸಂದರ್ಭಗಳಲ್ಲಿ ಆಹಾರದ ಶುಚಿ-ರುಚಿಯ ಬಗ್ಗೆ ಅಸಮಧಾನ ಹೊಂದಿ ಬಾಣಸಿಗರ ಮೇಲೆ ಕಿಡಿ ಕಾರುತ್ತಾ ಅವರನ್ನು ಉಗ್ರ ಶಿಕ್ಷೆಗೆ ಒಳಪಡಿಸುತ್ತಿದ್ದುದ್ದಲ್ಲದೇ ಕೆಲವೊಮ್ಮೆ ಮರಣ ದಂಡನೆಯನ್ನೂ ಸಹ ವಿಧಿಸುತ್ತಿದ್ದನಂತೆ. ಪರಿಸ್ಥಿತಿ ಹೀಗಿರುವಾಗ ಹಬ್ಬ ಹರಿದಿನಗಳಲ್ಲಿ ಮಾತ್ರ ರಾಜನ ಮುದ್ದಿನ ಮಡದಿಯಾದ ದಾಜೀ ಎಂಬಾಕೆಯು ಬಾಣಸಿಗರು ಮಾಡಿ ಬಡಿಸುವ ಎಲ್ಲಾ ಅಡುಗೆಯನ್ನು ಮೇಜಿನ ಮೇಲಿರಿಸಿದಾಗ, ರಾಜನು ಊಟವನ್ನು ಆರಂಭಿಸುವ ಮೊದಲು ತಾನು ಅದರ ರುಚಿಯನ್ನು ಸವಿದು ಎಲ್ಲಾ ಸರಿಯಾಗಿದೆ ಎನಿಸಿದರೆ ಮಾತ್ರ ರಾಜನಿಗೆ ಬಡಿಸಲಾಗುತ್ತಿತ್ತು. ಒಮ್ಮೆ ಯಾವುದೋ ಒಂದು ಹಬ್ಬದ ಸಂದರ್ಭದಲ್ಲಿ ರಾಜನಾಗಲೇ ಊಟದ ಮೇಜಿನ ಬಳಿಸಾರಿದ್ದನು. ಒಂದು ಅಡುಗೆಯ ಪದಾರ್ಥವು ಆಗತಾನೇ ಒಲೆಯಿಂದ ಇಳಿಸಿ ತಂದ ಪರಿಣಾಮವಾಗಿ ಬಹಳ ಬಿಸಿಯಾಗಿತ್ತು. ಇನ್ನೂ ಹಾಗೇ ಬಡಿಸಿದರೆ ರಾಜನಿಗೆ ಕೋಪ ಬರುವುದೆಂಬ ಸಲುವಾಗಿ ಏನು ಮಾಡುವುದು? ಎಂದು ಯೋಚಿಸಿ, ತನ್ನ ತಲೆಗೆ ಕೇಶಾಲಂಕಾರಕ್ಕಾಗಿ ಸಿಕ್ಕಿಸಿಕೊಂಡಿದ್ದ ಎರಡು ದಂತದ ಕಡ್ಡಿಗಳಿಂದ ಬಿಸಿಯಾದ ಪದಾರ್ಥವನ್ನು ಪಾತ್ರೆಯಿಂದ ಹೊರ ತೆಗೆದು ಬಾಯಿಂದ ಸ್ವಲ್ಪ ಗಾಳಿಯನ್ನು ಊದಿ ತಣ್ಣಗಾದ ಮೇಲೆ ರಾಜನಿಗೆ ಬಡಿಸಿದಳು. ಇದನ್ನು ಗಮನಿಸಿದ ರಾಜನಿಗೆ ವಿಚಿತ್ರ ಅನುಭವದ ಅಲೆಯ ಮೇಲೆ ತೇಲಿ ಮುಂದೆ ಪ್ರತೀದಿನ ಹೀಗೆ ಎರಡು ಕಡ್ಡಿಗಳಿಂದ ಆಹಾರವನ್ನು ಹಿಡಿದು ಆರಿಸಿ ತನಗೆ ಬಡಿಸಲು ಮುದ್ದಿನ ರಾಣಿಗೆ ಆದೇಶಿಸಿದನು. ಹೊಸದಾದ ಈ ಚಟುವಟಿಕೆಯು ಮುಂದೆ ರಾಜಪರಿವಾರದವರಿಂದ ಆರಂಭವಾಗಿ ರಾಜ್ಯದ ಎಲ್ಲರೂ ಅನುಸರಿಸುವಂತಾಯಿತು.

ಇನ್ನೊಂದು ನಂಬಿಕೆಯಂತೆ, ಕ್ರಿ.ಪೂ. ಆರನೇ ಶತಮಾನದಲ್ಲಿದ್ದ ಕನ್‌ಫ್ಯೂಷಿಯಸ್‌ನ ಹೇಳಿಕೆಯಂತೆ ಕತ್ತಿ, ಚಾಕು ಹಾಗೂ ಇತರೆ ಮಾರಕ ಅಸ್ತ್ರಗಳು ಊಟದ ಸಮಯದಲ್ಲಿ ಜೊತೆಯಲ್ಲಿದ್ದರೆ ಶ್ರೇಯಸ್ಕರವಲ್ಲ ಎಂಬ ಭಾವನೆ ಬೇರೂರಿ ಅವುಗಳೆಲ್ಲವನ್ನು ಅಡುಗೆಯ ಮನೆಗಷ್ಟೇ ಸೀಮಿತಗೊಳಿಸುವ ನಿಟ್ಟಿನಲ್ಲಿ ಊಟ ಮಾಡಲು ಮರದ ಅಥವಾ ಬಿದಿರಿನ ಸಣ್ಣ ಕಡ್ಡಿಗಳನ್ನು ಉಪಯೋಗಿಸಲು ಆರಂಭಿಸಲಾಯಿತು.

ಮತ್ತೊಂದು ನಂಬಿಕೆಯ ಪ್ರಕಾರ, ಹಿಂದೆಲ್ಲಾ ಆಹಾರವನ್ನು ಇಡೀಯಾಗಿ ಬೇಯಿಸಿಕೊಂಡು, ಊಟ ಮಾಡಲು ಕುಳಿತಾಗ ತಮ್ಮ ಮುಂದಿರುವ ದೊಡ್ಡ ಗಾತ್ರದ ಆಹಾರವನ್ನು ತಮಗೆಷ್ಟು ಬೇಕೋ ಅಷ್ಟು ಪ್ರಮಾಣದ ಅನುಸಾರವಾಗಿ ಸಣ್ಣದಾಗಿ ತುಂಡರಿಸಿಕೊಂಡು ತಿನ್ನುವುದು ವಾಡಿಕೆಯಾಗಿತ್ತು. ಒಮ್ಮೆ, ಅಡುಗೆ ಮಾಡಲು ಉಪಯೋಗಿಸುತ್ತಿದ್ದ ಉರುವಲಿಗೆ ಭಾರೀ ಪ್ರಮಾಣದಲ್ಲಿ ವ್ಯತ್ಯಯ ಉಂಟಾಗಿ, ಇರುವ ಉರುವಲನ್ನು ಅತೀ ಜಾಗರೂಕತೆಯಿಂದ ಬಳಸುವ ಮಾರ್ಗವನ್ನು ಅರಸುತ್ತಾ, ಕಡೆಗೆ ಆಹಾರವನ್ನು ಇಡೀಯಾಗಿ ಬೇಯಿಸುವ ಬದಲು ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿ ಬೇಯಿಸಿದರೆ ಉರುವಲಿನ ಉಳಿತಾಯಕ್ಕೆ ಪೂರಕವೆನಿಸಿ ಅದನ್ನೇ ಅನುಸರಿಸಲಾಯಿತು. ಊಟಕ್ಕೆ ಕುಳಿತಾಗ ಆಹಾರವನ್ನು ತುಂಡರಿಸುವ ಅವಶ್ಯಕತೆ ಇಲ್ಲದೇ ಇದ್ದರೂ ಬಿಸಿಯಾದ ಸಣ್ಣ ಆಹಾರದ ತುಣುಕುಗಳನ್ನು ಪಾತ್ರೆಯಿಂದ ತೆಗೆದು ಬಾಯಿಗಿಡಲು ಅನುಕೂಲವಾಗಲೆಂದು ಮರದ ಅಥವ ಬಿದಿರಿನ ಕಡ್ಡಿಗಳನ್ನು ಬಳಸಲು ಆರಂಭಿಸಲಾಯಿತು.

ಹೀಗೇ ಬಿಸಿಯಾದ ಆಹಾರ ಪದಾರ್ಥಗಳನ್ನು ಹಿಡಿಯಲು ಉಷ್ಣವಾಹಕಗಳಲ್ಲದ ಮರದ ಅಥವಾ ಬಿದಿರಿನಿಂದ ತಯಾರಿಸಲ್ಪಡುತ್ತಿದ್ದ ಚಾಪ್‌ಸ್ಟಿಕ್‌ಗಳು ಕಾಲಚಕ್ರಕ್ಕೆ ಸಿಲುಕಿ ಮುಂದುವರೆದಂತೆ ಬೆಳ್ಳಿ, ದಂತ, ಪ್ರಾಣಿಗಳ ಮೂಳೆ, ಜೇಡ್ ಕಲ್ಲು, ಉಕ್ಕು, ಹಿತ್ತಾಳೆ, ತಾಮ್ರದ ಜೊತೆಗೆ ಪ್ಲಾಸ್ಟಿಕ್‌ನಿಂದ ತಯಾರಿಸಲು ಆರಂಭವಾಯಿತು. ಅಂದಹಾಗೇ ಸಾಮಾನ್ಯವಾಗಿ ಚಾಪ್‌ಸ್ಟಿಕ್‌ಗಳ ಉದ್ದ ೨೫ ಸೆ.ಮೀ. ಕ್ರಿ.ಶ. ಐದನೇ ಶತಮಾನದಲ್ಲಿ ನೆರೆಯ ರಾಷ್ಟ್ರಗಳಾದ ಕೊರಿಯಾ, ಜಪಾನ್ ಮತ್ತು ವಿಯೆಟ್ನಾಮ್‌ಗೆ ವಲಸೆಯಾಯಿತು.

**ಊಟ ಮಾಡುವ ಸಮಯದಲ್ಲಿ ಚಾಪ್‌ಸ್ಟಿಕ್‌ಗಳನ್ನು ಬಳಸುವಾಗ ಪಾಲಿಸಬೇಕಾದ ಕೆಲವು ನಿಯಮಗಳು:**

- ಪಂಕ್ತಿ ಭೋಜನದಲ್ಲಿ ಮೇಜಿನ ಮೇಲಿರುವ ಚಾಪ್‌ಸ್ಟಿಕ್‌ಗಳನ್ನು ಹಿರಿಯರು ಮೊದಲು ತೆಗೆದುಕೊಳ್ಳಬೇಕು
- ಊಟ ಬಡಿಸುವ ಮುನ್ನಾ ಅಥವಾ ನಂತರ ಚಾಪ್‌ಸ್ಟಿಕ್‌ಗಳಿಂದ ಶಬ್ಧ ಮಾಡಬಾರದು
- ಚಾಪ್‌ಸ್ಟಿಕ್‌ಗಳನ್ನು ಒಂದಕ್ಕೊಂದು ಸಮಾನಾಂತರವಾಗೆ ಬಟ್ಟಲಿನ ಪಕ್ಕದಲ್ಲೇ ಇಡಬೇಕು, ಮೇಲಿಡುವುದು ತರವಲ್ಲಾ
- ಚಾಪ್‌ಸ್ಟಿಕ್‌ಗಳನ್ನು ಮೇಜಿನ ಮೇಲಿಡುವಾಗ ಒಂದಕ್ಕೊಂದು ಉಲ್ಟಾ ಮಾಡಬಾರದು
- ಚಾಪ್‌ಸ್ಟಿಕ್‌ಗಳನ್ನು ನೆಕ್ಕಬಾರದು / ಆಹಾರಕ್ಕೆ ಸಿಕ್ಕಿಸಬಾರದು
- ಚಾಪ್‌ಸ್ಟಿಕ್‌ಗಳ ಸಹಾಯದಿಂದ ಪಾತ್ರೆಗಳನ್ನು ತಳ್ಳಬಾರದು
- ಊಟದ ವೇಳೆಯಲ್ಲಿ ಮಾತನಾಡುವಾಗ ಚಾಪ್‌ಸ್ಟಿಕ್‌ಗಳನ್ನು ಬಳಸಿ ಯಾರನ್ನೇ ತೋರಿಸಬಾರದು
- ಚಾಪ್‌ಸ್ಟಿಕ್‌ಗಳನ್ನು ಒಂದೇ ಕೈಯಲ್ಲಿ ಹಿಡಿಯಬೇಕು, ಎರಡು ಕೈಗಳನ್ನುಪಯೋಗಿಸಿ ಆಹಾರವನ್ನು ಬಗೆಯಬಾರದು
- ಮಕ್ಕಳು ಚಾಪ್‌ಸ್ಟಿಕ್‌ಗಳ ಅಸಮರ್ಪಕ ಬಳಕೆ ಮಾಡಿದರೆ ಅದಕ್ಕೆ ಪೋಷಕರೇ ಹೊಣೆ

**ಚಾಪ್‌ಸ್ಟಿಕ್‌ಗಳ ಬಗ್ಗೆ ಇರುವ ನಂಬಿಕೆ:**

- ಚಾಪ್‌ಸ್ಟಿಕ್‌ಗಳನ್ನು ಬಳಸುವವರಿಗೆ ನೆನಪಿನ ಶಕ್ತಿ ಜಾಸ್ತಿ
- ಚಾಪ್‌ಸ್ಟಿಕ್‌ಗಳನ್ನು ಬಳಸುವ ಕಲಾವಿದರ ನೈಪುಣ್ಯತೆ ಹೆಚ್ಚು
- ಅಸಮಾನ ಉದ್ದದ ಚಾಪ್‌ಸ್ಟಿಕ್‌ಗಳು ದೊರೆತವರಿಗೆ ಸಂಕಲ್ಪಿಸಿದ ಕಾರ್ಯದಲ್ಲಿ ವಿಳಂಬ
- ಬಳಸುವಾಗ ಕೈಜಾರಿದರೆ ಅಮಂಗಳ

**ಉಡುಗೊರೆಯಾಗಿ ನೀಡುವಾಗ:**

- ಮಕ್ಕಳಿಗೆ: ಶೀಘ್ರವಾಗಿ ಹರ್ಷದಾಯಕ ಬೆಳವಣಿಗೆಯಾಗಲಿ
- ಸ್ನೇಹಿತರಿಗೆ: ಮಿತ್ರುತ್ವ ಸಹಜ, ಸಮಾನ ಮತ್ತು ಅಮರವಾಗಿರಲಿ
- ಪ್ರೇಮಿಗಳಿಗೆ: ಸದಾ ಜೊತೆಯಾಗಿರಲಿ ಮತ್ತು ಸಂತೋಷವಾಗಿರಲಿ
- ನವದಂಪತಿಗಳಿಗೆ: ದಾಂಪತ್ಯ ಅಮರವಾಗಿರಲಿ ಮತ್ತು ವಂಶ ಬೆಳೆಯಲಿ, ಚೀನಿ ಭಾಷೆಯಲ್ಲಿ "ಕ್ವೈಝ್" ಎಂದೆನಿಸಿಕೊಳ್ಳುವ ಚಾಪ್‌ಸ್ಟಿಕ್‌ಗಳ ಅರ್ಥ" ಶೀಘ್ರ ಪುತ್ರ ಪ್ರಾಪ್ತಿ!







**ಆಸ್ತಿ:**

ಇಸವಿ ೧೯೪೬ ರಲ್ಲಿ ಚಾಲನೆಗೊಂಡ ಭೂಮಿ ವಿತರಣಾ ಕಾಯಿದೆಯ ಚಟುವಟಿಕೆಯು ಕ್ರಮೇಣ ಇಸವಿ ೧೯೪೯ ರಲ್ಲಿ ಚೀನಾದ ಗಣರಾಜ್ಯ ಉಗಮಗೊಳ್ಳುವುದರೊಂದಿಗೆ ದೇಶದ ಆಡಳಿತವನ್ನು ತನ್ನ ತೆಕ್ಕೆಗೆ ತೆಗೆದುಕೊಂಡ ಕಮ್ಯೂನಿಸ್ಟ್ ಪಕ್ಷವು ಪ್ರಮುಖವಾಗಿ ದೇಶಾದ್ಯಂತ ಬಹುಸಂಖ್ಯಾತರಾದ ಅತೀ ಬಡವರ ಹಾಗೂ ಮಧ್ಯಮ ವರ್ಗದ ರೈತರಿಂದ ದೊರಕಿದ ಮಹತ್ತರವಾದ ಬೆಂಬಲದೊಂದಿಗೆ ಸಕ್ರೀಯವಾಗಿ ಅನುಷ್ಠಾನಗೊಳಿಸಲು ಸಾಧ್ಯವಾಯಿತು. ಈ ಕಾಯಿದೆಯನ್ವಯ ದೇಶಾದ್ಯಂತ ಇರುವ ಭೂಮಿಯನ್ನೆಲ್ಲಾ ರಾಷ್ಟ್ರೀಕರಣಗೊಳಿಸಿ ಸರ್ಕಾರವು ತನ್ನ ವಶಕ್ಕೆ ಪಡೆದುಕೊಂಡು ಪ್ರತೀ ಹಳ್ಳಿಗೆ ಸಂಬಂಧಿಸಿದ ಭೂಮಿಯನ್ನು ಅಲ್ಲಿಯವರೆಗೂ ತಮ್ಮ ಸುಪರ್ದಿನಲ್ಲಿ ಇರಿಸಿಕೊಂಡಿದ್ದ ಎಲ್ಲಾ ಭೂಮಿಯೊಡೆಯರಿಂದ ಬಲವಂತವಾಗಿ ಪಡೆದು ಇಡೀ ಹಳ್ಳಿಯಲ್ಲಿ ನೆಲೆಸಿರುವ ಜನರಿಗೆ ಅವರ ಕುಟುಂಬದಲ್ಲಿನ ಜನಸಂಖ್ಯೆಯ ಆಧಾರದ ಮೇರೆಗೆ ಕುಟುಂಬದ ಯಜಮಾನರಿಗೆ ಸಾರಾಸಗಟಾಗಿ ಇಂತಿಷ್ಟು ವರ್ಷಗಳ ಭೋಗ್ಯಕ್ಕೆಂದು (ವಾಣಿಜ್ಯ ಬಳಕೆಗೆ ೪೦ ವರ್ಷಗಳು, ವಾಸಿಸಲು ೭೦ ವರ್ಷಕ್ಕೆ ಹಾಗೂ ಬೇಸಾಯಕ್ಕೆ ೩೦ರಿಂದ ೪೫ ವರ್ಷಗಳು) ಕರಾರು ಮಾಡಿಕೊಂಡು ಹಂಚುವುದರೊಂದಿಗೆ ಸ್ಥಳಿಯರ್ಯಾರೂ ಬೇರೆಲ್ಲಿಗೂ ವಲಸೆ ಹೋಗದಂತೆ ಕಟ್ಟಪ್ಪಣೆ ಮಾಡಿತು. ಇದರ ಪರಿಣಾಮವಾಗಿ ಹಳ್ಳಿಯ ಪ್ರತೀ ಕುಟುಂಬವು ತಮ್ಮದೇ ಆದ ಭೂಮಿಯ ಒಡೆಯರಾಗುವ ಅವಕಾಶ ಲಭಿಸಿತು. ಮುಂದೆ ವಲಸೆಯ ಕಾನೂನನ್ನು ೧೯೮೨ರಲ್ಲಿ ಸಡಿಲಗೊಳಿಸಿತು.

ಮುಂದೆ ಇಸವಿ ೧೯೫೦ರಲ್ಲಿ ಪ್ರತೀ ಹಳ್ಳಿಯಲ್ಲಿನ ಸಮಗ್ರ ಕುಟುಂಬದ ಭೂಮಿಯೊಡೆಯರನ್ನೆಲ್ಲಾ ಸೇರಿಸಿ ಅವರೆಲ್ಲರನ್ನು ಕೆಲವು ಗುಂಪುಗಳಾಗಿ ವಿಂಗಡಿಸಿ ಪ್ರತೀ ಗುಂಪಿನ ಭೂಮಿಯಿಂದ ಇಂತಿಷ್ಟು ಇಳುವರಿಯನ್ನು, ಕೂಲಿಯಾಧಾರಿತ ಹಾಗೂ ಕನಿಷ್ಟ ಆರ್ಥಿಕ ಸಹಾಯ ನೀಡುವುದಲ್ಲದೇ ವಾರ್ಷಿಕ ಕಂದಾಯ, ಆದಾಯ ತೆರಿಗೆ ಮತ್ತು ಇತರೆ ತೆರಿಗೆಗಳನ್ನು ಮುರಿದುಕೊಳ್ಳುವ ಒಪ್ಪಂದದ ಮೇರೆಗೆ ಸರ್ಕಾರಕ್ಕೆ ಒಪ್ಪಿಸಬೇಕೆಂಬ ನಿಯಮವನ್ನು ಜಾರಿಗೊಳಿಸಲಾಯಿತು. ಹಾಗಾಗಿ, ಒಟ್ಟಾರೆ ಗುಂಪಿನ ಇಳುವರಿಯನ್ನು ಗಮನದಲ್ಲಿರಿಸಿಕೊಂಡಿದ್ದ ಸರ್ಕಾರಕ್ಕೆ ಪ್ರತೀ ಕುಟುಂಬದ ನಡುವೆ ಇದ್ದ ಇಳುವರಿಯ ಪ್ರಮಾಣದಲ್ಲಿನ ವ್ಯತ್ಯಾಸವನ್ನು ಸೂಕ್ಷ್ಮವಾಗಿ ಅಳೆಯಲು ಸಾಧ್ಯವಾಗದೇ ಇಸವಿ ೧೯೬೨ ರಲ್ಲಿ ಮತ್ತೆ ಕಾಯಿದೆಯನ್ನು ಪರಿಷ್ಕರಿಸಿ ಕ್ರಮವಾಗಿ ಕೌಟುಂಬಿಕ, ಗುಂಪಿನ ಹಾಗೂ ಹಳ್ಳಿಯ ಒಟ್ಟಾರೆ ಇಳುವರಿಯನ್ನು ಸೂಕ್ಷ್ಮವಾಗಿ ಗಮನಿಸುವ ನಿಯಮವನ್ನು ಜಾರಿಗೊಳಿಸಲಾಯಿತು. ತದನಂತರ, ೧೯೭೦ರಲ್ಲಿ ಮತ್ತೊಮ್ಮೆ ಪರಿಷ್ಕೃತಗೊಂಡು "ಕೌಟುಂಬಿಕ ಆಧಾರಿತ ಜವಾಬ್ದಾರಿ" ಎಂಬ ಕಾಯಿದೆಯೊಡನೆ ಪ್ರತೀ ಕುಟುಂಬವು ಕಡ್ಡಾಯವಾಗಿ ಯಾವುದೇ ರಿಯಾಯಿತಿ ಇಲ್ಲದೇ ಇಂತಿಷ್ಟು ಇಳುವರಿಯನ್ನು ತಪ್ಪದೇ ಸರ್ಕಾರಕ್ಕೆ ಒಪ್ಪಿಸಲೇಬೇಕೆಂಬ ನಿಯಮದ ಪ್ರಕಾರ ಕುಟುಂಬವು ವಿಧಿ ಇಲ್ಲದೇ ಪಾಲಿಸಬೇಕಾದ್ದರಿಂದ ಮುತುವರ್ಜಿವಹಿಸಿ ವ್ಯೆವಸಾಯದೆಡೆಗೆ ಸರ್ವ ಸದಸ್ಯರು ಗಮನ ಹರಿಸುವಂತಾಯಿತು. ಪರಿಣಾಮ, ಪ್ರತೀ ಕುಟುಂಬದ ವಾರ್ಷಿಕ ಆದಾಯದ ಭರವಸೆ ಹಾಗೂ ಕೆಲವು ಕುಟುಂಬಗಳು ನಿಗದಿತ ಪ್ರಮಾಣದ ಇಳುವರಿಗಿಂತ ಹೆಚ್ಚು ದಕ್ಕಿದ ಧವಸ-ಧಾನ್ಯವನ್ನು ಮುಕ್ತ ಮಾರುಕಟ್ಟೆಯಲ್ಲಿ ಬಿಕರಿ ಮಾಡಲು ಅವಕಾಶವಿದ್ದು ಅಂಥಾ ಕುಟುಂಬಗಳ ಆರ್ಥಿಕ ಸ್ಥಿತಿಯಲ್ಲಿ ಗಮನಾರ್ಹ ಬದಲಾವಣೆಯಾಯಿತು. ಸ್ಥಳೀಯ ಸರ್ಕಾರವು ತನ್ನ ಸುಪರ್ದಿನಲ್ಲಿರುವ ಎಲ್ಲಾ ಹಳ್ಳಿಗಳ ಭೂಮಿಯಲ್ಲಿನ ಇಳುವರಿಯ ಲಾಭ ನಷ್ಟವನ್ನು ಸಂಭಾಳಿಸಬೇಕು.

ಭೂಸ್ವಾದೀನ ಕಾಯಿದೆಯನ್ವಯ ಯಾವುದೇ ಕುಟುಂಬದ ಸುಪರ್ದಿನಲ್ಲಿರುವ ಭೂಮಿಯನ್ನು ಸರಕಾರವು ಅಭಿವೃದ್ಧಿ ಕಾರ್ಯದ ನಿಮಿತ್ತ ತನ್ನ ವಶಪಡಿಸಿಕೊಂಡಾಗ, ಕುಟುಂಬಕ್ಕೆ ದಕ್ಕುವ ಪರಿಹಾರದ ಹಣದ ಗರಿಷ್ಟ ಮೊತ್ತವೆಂದರೆ; ಕಳೆದ ಮೂರು ವರ್ಷಗಳಲ್ಲಿ ತಲಾ ಒಂದು ಹೆಕ್ಟೇರ್ ಭೂಮಿಯಲ್ಲಿ ಬಂದ ಇಳುವರಿಯ ಸರಾಸರಿಯ ಮೊತ್ತದ ಮೂವತ್ತರಷ್ಟು. ಸಾಮಾನ್ಯವಾಗಿ ರಸ್ತೆ ಮತ್ತು ರೈಲು ಮಾರ್ಗಕ್ಕೆಂದು ವಶಪಡಿಸಿಕೊಂಡರೆ ಸಿಗುವ ಪರಿಹಾರ ಸರಾಸರಿಯ ಮೊತ್ತದ ಹತ್ತರಷ್ಟೇ, ಇನ್ನು ವಾಣಿಜ್ಯ ಮತ್ತು ಕಾರ್ಖಾನೆಗಳಿಗಾದರೆ ಸರಾಸರಿಯ ಮೊತ್ತದ ಇಪ್ಪತ್ತರಿಂದ ಇಪ್ಪತ್ತೈದರಷ್ಟು. ಲೆಕ್ಕಾಚಾರದ ಪ್ರಕಾರ ಪ್ರತೀ ಎಕೆರೆಗೆ ಸರಾಸರಿ ರೂಪಾಯಿ ಏಳು ಲಕ್ಷದಿಂದ ನಲವತ್ತು ಲಕ್ಷದವರೆಗೂ ಲಭಿಸುತ್ತದೆ ಕಡತದಲ್ಲಿ. ಮೊತ್ತವು ಕುಟುಂಬದ ಯಜಮಾನರ ಕೈ ಸೇರುವಷ್ಟರಲ್ಲಿ ಮೂರ್ನಾಲ್ಕು ಹಂತದಲ್ಲಿ ಕಡಿತಗೊಳ್ಳುತ್ತದೆ! ಕೆಲವೆಡೆ, ಭೂಸ್ವಾಧೀನದ ದೆಸೆಯಿಂದ ಆಸ್ತಿ ಕಳೆದುಕೊಂಡ ಮಾಲೀಕರಿಗೆ, ಪರಿಹಾರದ ಹಣದೊಂದಿಗೆ, ಪರ್ಯಾಯ ಭೂಮಿ ಅಥವಾ ಮನೆಯನ್ನು ಮಂಜೂರು ಮಾಡಲಾಗುತ್ತದೆ. ಹೀಗೆ ದಕ್ಕಿದ ಆಸ್ತಿಯನ್ನು ಮಾಲೀಕರು ಮತ್ತು ಅವರ ಮುಂದಿನ ಹಕ್ಕುದಾರ ಪೀಳಿಗೆಯು ಸ್ವತಃ ಅನುಭವಿಸಲು ಮಾತ್ರ ಅವಕಾಶವಿದ್ದು ಮಾರಾಟ ಮಾಡಲು ನಿಷೇಧವಿದೆ.

ಆಸ್ತಿಯ ಗುತ್ತಿಗೆ ಅವಧಿಯ ತರುವಾಯ ಏನು ಎಂಬುದು ಇನ್ನೂ ಯಾರಿಗು ಸ್ಪಷ್ಟವಾದ ಅರಿವಿಲ್ಲ. ಆಸ್ತಿಯೊಡೆಯರಿಗೆ ಇರುವ ನಂಬಿಕೆ ಎಂದರೆ ಮತ್ತೊಂದು ಅವಧಿಗೆ ನವೀಕರಣವಾಗುತ್ತದೆ.

**ಏಕ ಸಂತಾನ ಕಾಯಿದೆ:**

ಅರವತ್ತರ ದಶಕದ ಅಂಚಿನಲ್ಲಿದ್ದ ಜನಸಂಖ್ಯೆಯನ್ನು ಗಮನಿಸಿದ ಸರ್ಕಾರ "ವಿಳಂಬ, ಅಂತರ ಹಾಗೂ ವಿರಳ" ಎಂಬ ಘೋಷವಾಕ್ಯದೊಡನೆ ತನ್ನ ಪ್ರಜೆಗಳಿಗೆ ಸ್ವಯಂ ಪ್ರೇರಿತರಾಗಿ ವಿಳಂಬವಾಗಿ ಮದುವೆಯಾಗಲು, ಮಕ್ಕಳ ನಡುವಿನ ದೀರ್ಘ ಅಂತರ ಕಾಯ್ದುಕೊಳ್ಳುವಿಕೆ ಹಾಗು ಕಡಿಮೆ ಮಕ್ಕಳನ್ನು ಹೆರಲು ಪ್ರೋತ್ಸಾಹಿಸಿತು.

ಇಸವಿ ೧೯೭೯ರಲ್ಲಿ ದೇಶದಲ್ಲಿ ಕ್ರಮೇಣ ಏರುತ್ತಿದ ಜನಸಂಖ್ಯಾ ಸ್ಫೋಟದ ಪರಿಣಾಮಗಳಾದ ಆರ್ಥಿಕ ಅಸ್ಥಿರತೆ, ನೈಸರ್ಗಿಕ ಸಂಪನ್ಮೂಲಗಳ ಅತಿಯಾದ ಬಳಕೆ ಮತ್ತು ಹೆಚ್ಚುತ್ತಿದ್ದ ನಿರುದ್ಯೋಗ ಸಮಸ್ಯೆಯನ್ನು ತಹಬಂದಿಗೆ ತರಲು "ಮಾರ್ಕ್ಸಿಸ್ಟ್ ಸಿದ್ಧಾಂತ" ದಂತೆ, ಪ್ರತೀ ದಂಪತಿಗೂ "ಏಕ ಸಂತಾನ" ಎಂಬ ಕಾಯಿದೆಯನ್ನು ತಾತ್ಕಾಲಿಕ ಅವಧಿಗೆ ಎಂಬ ಘೋಷಣೆಯೊಂದಿಗೆ ಜಾರಿಗೊಳಿಸಲಾಯಿತು. ಇಸವಿ ೨೦೦೨ ರವರೆಗೆ, ಅರ್ಹ ದಂಪತಿಗಳು ಸಂತಾನ ಭಾಗ್ಯವನ್ನು ಹೊಂದುವ ಮೊದಲು ಸ್ಥಳೀಯ ಆರೋಗ್ಯ ಕಛೇರಿಯಲ್ಲಿ ಅರ್ಜಿ ಸಲ್ಲಿಸಿ ಅವರಿಂದ ಒಪ್ಪಿಗೆ ಪಡೆಯಬೇಕಿತ್ತು.

ಈ ಕಾಯಿದೆಯಂತೆ ದೇಶದೊಳಗಿರುವ ಮತ್ತು ಹೊರದೇಶದಲ್ಲಿರುವ ಎಲ್ಲಾ ಚೀನಿಯರಿಗೆ ಇದು ಅನ್ವಯವಾದರೂ ಅವಳಿ ಅಥವ ತ್ರಿವಳಿ ಮಕ್ಕಳ ಜನನವನ್ನು ಏಕ ಸಂತಾನವೆಂದೇ ಪರಿಗಣಿಸಲಾಗುತ್ತದೆ. ಹಳ್ಳಿ ಮತ್ತು ಗುಡ್ಡಗಾಡು ಪ್ರದೇಶಗಳ ದಂಪತಿಗಳಿಗೆ ಮೊದಲನೆ ಸಂತಾನ ಹೆಣ್ಣು ಅಥವ ವಿಕಲಚೇತನರಾದರೆ ಎರಡನೆ ಮಗುವನ್ನು ಮೂರು ಅಥವಾ ನಾಲ್ಕು ವರ್ಷದ ತರುವಾಯ ಹೊಂದಬಹುದು. ಮೊದಲ ಮಗುವು ಅಕಾಲಮರಣಕ್ಕೀಡಾದರೆ ಅಥವ ಆಕಸ್ಮಿಕದಲ್ಲಿ ಚಿಂತಾಜನಕ ಸ್ಥಿತಿ ಪ್ರಾಪ್ತವಾದರೆ, ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಸಂತಾನ ಹರಣವಾದರೆ, ದಂಪತಿಗಳಿಬ್ಬರೂ ತಮ್ಮಗಳ ಪೋಷಕರಿಗೆ ಏಕಸಂತಾನವಾಗಿದ್ದರೆ ಹಾಗೂ ಹೊರದೇಶದಲ್ಲಿ ನೆಲೆಸಿದ್ದು ಚೀನಾಕ್ಕೆ ಖಾಯಂ ಆಗಿ ಹಿಂದಿರುಗುವ ಪ್ರಜೆಗಳು ಎರಡನೆ ಮಗುವನ್ನು ಪಡೆಯಲು ಅರ್ಹರು. ಹೊರದೇಶದಲ್ಲಿದ್ದು ಎರಡನೆ ಸಂತಾನ ಪಡೆದರೆ ಆ ಸಂತಾನವನ್ನು ಚೀನಾದ ನಾಗರೀಕ ಎಂದು ಪರಿಗಣಿಸಲಾಗುವುದಿಲ್ಲ. ಹಾಗೇನಾದರು ಪರಿಗಣಿಸಬೇಕೆಂದರೆ ನಿಗದಿತ ಶುಲ್ಕವನ್ನು ಸರ್ಕಾರಕ್ಕೆ ಪಾವತಿಸಬೇಕಾಗುತ್ತದೆ. ದೇಶೀಯ ಚೀನಿ ದಂಪತಿಗಳು ಕಾನೂನಿಗೆ ವಿರುದ್ಧ ಎರಡನೆ ಸಂತಾನ ಪಡೆದರೆ, ಸರ್ಕಾರದ ನಿಯಮ ಮತ್ತು ಲೆಕ್ಕಾಚಾರದಂತೆ ಆ ಕುಟುಂಬದ ವಾರ್ಷಿಕ ಸರಾಸರಿ ಆದಾಯದಷ್ಟು ದಂಡವನ್ನು ಕುಟುಂಬ ಯೋಜನಾ ಕಲ್ಯಾಣ ನಿಧಿಗೆ ಪಾವತಿಸಬೇಕಲ್ಲದೇ ಎರಡೂ ಮಕ್ಕಳ ವಿದ್ಯಾಭ್ಯಾಸಕ್ಕೆ ಬೋಧನಾ ಶುಲ್ಕವನ್ನೂ ಸಹ ಪೋಷಕರು ಭರಿಸಬೇಕಾಗುತ್ತದೆ. ಅಲ್ಲದೇ ಪೋಷಕರೇನಾದರು ಕಾರ್ಮಿಕರಾಗಿದ್ದರೆ ಅವರ "ಬೋನಸ್" ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ. ಜೊತೆಗೆ ಸರ್ಕಾರದಿಂದ ಲಭ್ಯವಿರುವ ಸವಲತ್ತುಗಳಿಂದ ವಂಚಿತರಾಗುತ್ತಾರೆ.

ಏಕ ಸಂತಾನದ ಕಾಯಿದೆಯನ್ನು ಪಾಲಿಸುವ ದಂಪತಿಗಳಿಗೆ "ಮೂಗಿನ ಮೇಲೆ ತುಪ್ಪ ಸವರು"ವ ಹಾಗೆ, ಏಕ ಸಂತಾನ ಪಾಲಿಸುತ್ತಿರುವ ದಂಪತಿ ಎಂಬ ಧೃಢೀಕರಣ ಪತ್ರ, ಬಾಣಂತೀತನಕ್ಕೆ ಅಧಿಕ ದಿನಗಳ ರಜೆ, ಬಡ್ಡಿರಹಿತ ಸಾಲಕ್ಕೆ ಅರ್ಹತೆ, ವೈದ್ಯಕೀಯ ನೆರವು, ಗೃಹ ಸಾಲಕ್ಕೆ ಮನ್ನಣೆ, ಸರ್ಕಾರಿ ನೌಕರರಿಗೆ ತಮ್ಮ ಒಂದೇ ಮಗುವಿಗೆ ಹದಿನಾಲ್ಕು ವರ್ಷ ಆಗುವವರೆಗೂ ಪ್ರತೀ ವರ್ಷ ಒಂದು ಮಾಸದ ಅಧಿಕ ಸಂಬಳ ಹಾಗು ಮಗುವಿನ ಶಾಲೆಯ ದಾಖಲಾತಿಗೆ ಆದ್ಯತೆ ಕಲ್ಪಿಸಲಾಗಿದೆ. ಕಾಯಿದೆಯನ್ನು ಚಾಚೂತಪ್ಪದೆ ಅನುಷ್ಠಾನಗೊಳಿಸುವ ಹುನ್ನಾರದಲ್ಲಿ ದೇಶದೆಲ್ಲೆಡೆ ಕುಟುಂಬ ಯೋಜನಾ ಕಲ್ಯಾಣ ಇಲಾಖೆ ಹಾಗೂ ವೈದ್ಯಕೀಯ ಅಧಿಕಾರಿಗಳ ಮೇಲಿರುವ ಜವಾಬ್ದಾರಿಯ ಒತ್ತಡದಿಂದ ಅನಧಿಕೃತ ಗರ್ಭವನ್ನು ಪ್ರತೀ ವಲಯದಲ್ಲೂ ಅತೀ ಸೂಕ್ಷ್ಮವಾಗಿ ಜಾಲಾಡಿ ಯಾವುದೇ ಹಂತದಲ್ಲಿದ್ದರೂ ನಿರ್ದಾಕ್ಷಿಣ್ಯವಾಗಿ ತೊಡೆದುಹಾಕಲು ಇರುವ ಎಲ್ಲಾ ಅನುಕೂಲತೆಗಳನ್ನು ಸಾವಕಾಶವಾಗಿ ಬಳಸಿಕೊಳ್ಳಲಾಗುತ್ತದೆ. ಪರಿಣಾಮ ಸಾಕಷ್ಟು ಸಾವು ನೋವುಗಳಲ್ಲದೇ ಮುಂದೆ ಎಂದಿಗೂ ತಾಯ್ತನದ ಭಾಗ್ಯ ಮತ್ತೆ ಲಭಿಸದ ಸ್ಥಿತಿಯೊಡನೆ ಅನವರತ ಸಾಗುತ್ತಿದೆ. ಪ್ರಪಂಚದೆಲ್ಲೆಡೆಯಿಂದ ಈ ಕೃತ್ಯಕ್ಕೆ ವಿರೋಧವಿದ್ದರೂ ದೇಶದಲ್ಲಿನ ಚಟುವಟಿಕೆಗಳಿಗೆ ಯಾವುದೇ ಚ್ಯುತಿಯಿಲ್ಲ.

ಸರ್ಕಾರ ಘೋಷಿಸಿರುವಂತೆ, ಏಕಸಂತಾನದಿಂದ ದೇಶಕ್ಕಾಗುವ ಅಮೂಲಾಗ್ರ ಅನುಕೂಲ ಒಂದೆಡೆಯಾದರೆ ಅದಕ್ಕೆ ಪೂರಕವೆನ್ನುವಂತೆ ಪೋಷಕರಿಬ್ಬರೂ ತಮ್ಮ ಒಂದೇ ಮಗುವಿನ ಆರೈಕೆ, ಸಮಯ ವ್ಯೆಯಿಸುವಿಕೆ, ಹಣದ ಉಳಿತಾಯ, ಹಾಗೂ ಮಗುವಿನ ಪಾಲಿಸುವಿಕೆಯಲ್ಲಿ ಉನ್ನತಿ ಕಾಣಬಹುದು ಎಂಬ ಧನಾತ್ಮಕ ಅಂಶಗಳ ವಿರುದ್ಧ ಏಕಸಂತಾನದಿಂದಾಗುವ ದುಷ್ಪರಿಣಾಮಗಳ ಬಗ್ಗೆ ದನಿ ಎತ್ತಿದ ಅನೇಕ ಸಂಘ ಸಂಸ್ಥೆಗಳು ಮಾಡಿದ ಪಟ್ಟಿಯೇನು ಸಣ್ಣದಲ್ಲ. ೪-೨-೧ ಎಂಬ ಸೂತ್ರದಂತೆ, ಒಂಟಿ ಸಂತಾನವೆನಿಸಿಕೊಂಡ ಮಗುವು ವಯಸ್ಕನಾದಾಗ ತನ್ನ ಪೋಷಕರು ಮತ್ತು ಅವರಿಬ್ಬರ ಪೋಷಕರು ಸೇರಿದರೆ ಒಟ್ಟಿಗೆ ಆರು ತಲೆಗಳ ಜವಾಬ್ದಾರಿ ಒಬ್ಬನ ಮೇಲೆ! ಅಂಕಿ-ಅಂಶದಂತೆ ಐವತ್ತರ ದಶಕದಲ್ಲಿದ್ದ ಚೀನಿಯರ ಸರಾಸರಿ ಜೀವಿತಾವಧಿ ೪೧ ವರ್ಷಗಳಿಂದ ಪ್ರಸ್ತುತ ೭೩ ವರ್ಷಗಳು! ಅತೀ ಮುದ್ದಿನಿಂದ ಸಾಕಿದ ಮಕ್ಕಳು ಮೊದ್ದಾಗುವ, ಹಟದ ಸ್ವಭಾವವನ್ನು ಮೈಗೂಡಿಸಿಕೊಳ್ಳುವಿಕೆ, ಒಂಟಿತನದ ಖಿನ್ನತೆ, ತಾಯಿ ತಂದೆಯರೊಂದಿಗಷ್ಟೇ ಸೀಮಿತವಾದ ಒಡನಾಟವಾದ್ದರಿಂದ ಇತರೊಂದಿಗೆ ಬೆರೆಯಲಿಚ್ಚಿಸುವುದು, ಪರರೊಂದಿಗಿನ ಒಡನಾಟದ ಅರಿವಿನ ನ್ಯೂನತೆ ಮುಂದೆ ಸಮಾಜದಲ್ಲಿನ ಮಾನವ ಸಂಬಂಧಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗದಿರುವಿಕೆ, ಏಕಸಂತಾನವೆಂದು ಕಾನೂನಿಗೆ ವಿರುದ್ಧವಾದರೂ, ಗಂಡು ಮಗುವನ್ನು ಮಾತ್ರ ಉಳಿಸಿಕೊಳ್ಳುವ ದೆಸೆಯಿಂದ ಗಂಡು ಹೆಣ್ಣಿನ ನಡುವಿನ ಅನುಪಾತದಲ್ಲಿ ಭಾರಿ ವ್ಯೆತ್ಯಾಸ. ಪ್ರಕೃತಿದತ್ತವಾಗಿ ಪುರುಷ ಮತ್ತು ಸ್ತ್ರೀಯರ ನಡುವಿನ ಅನುಪಾತ ೧೦೫:೧೦೦, ಪ್ರಸ್ತುತ ಚೀನಾದಲ್ಲಿ ಸರಾಸರಿ ೧೨೦:೧೦೦ ರ ಮಟ್ಟವನ್ನು ತಲುಪಿದೆ.

ಏಕಸಂತಾನದ ಎರಡನೆಯ ಪೀಳಿಗೆಯನ್ನು ಕಾಣುವಾಗ್ಗೆ ಎಲ್ಲೆಡೆ ಉಳಿಯುವ ಕೌಟುಂಬಿಕ ಸಂಬಂಧಗಳೆಂದರೆ, ಅಜ್ಜ-ಅಜ್ಜಿ, ಅಪ್ಪ-ಅಮ್ಮ, ಅತ್ತೆ-ಮಾವ, ಮಗ-ಮಗಳು, ಸೊಸೆ-ಅಳಿಯ ಮತ್ತು ಮೊಮ್ಮಗ-ಮೊಮ್ಮಗಳು! ಮಿಕ್ಕೆಲ್ಲಾ ಸಂಬಂಧಗಳು ಹೇಳ ಹೆಸರಿಲ್ಲದಂತೆ ಸಮಾಜದಲ್ಲಿ ಮಾಯವಾಗಿ ಅವುಗಳು ಶಬ್ಧಗಳಾಗಷ್ಟೇ ಉಳಿದು ಪ್ರಶ್ನಾತೀತವಾಗುವ ಸಂಭವವನ್ನು ಎದುರಿಸುವುದು ಹೇಗೇ? ಏಕ ಸಂತಾನವನ್ನು ಹೊಂದಿದ ಪೋಷಕರು ಮಕ್ಕಳನ್ನು ಹಡೆಯುವ ವಯಸ್ಸನ್ನು ಮೀರಿದ ಮೇಲೇ ಇದ್ದ ಒಂದೇ ಸಂತಾನವು ಕೈ ಮೀರಿ ಇಹಲೋಕ ತ್ಯೆಜಿಸಿದರೆ, ಮುಂದೆ ಅವರ ಜೀವನದ ಗತಿ? ಆಸರೆಯಾಗಿ ಸಂಸಾರ ನಿರ್ವಹಣೆಯ ದೃಷ್ಟಿ ಒಂದೆಡೆಯಾದರೆ ತಮ್ಮ ಮರಣೋತ್ತರ ಕಾರ್ಯವನ್ನು ತೂಗಿಸುವವರು ಯಾರು? ಇವಿಷ್ಟೇ ಅಲ್ಲದೇ, ಪ್ರಕೃತಿದತ್ತವಾದ ಸಂತಾನ ಪ್ರಕ್ರಿಯೆಯ ಮೇಲೆ ಹೇರಿರುವ ಬಲವಂತದ ತಡೆಯಿಂದ ತಾಯಿಯ ಮೇಲಾಗುವ ಪರಿಣಾಮವನ್ನು ಸಧ್ಯಕ್ಕೆ ಅರ್ಥೈಸಲು ಸಾಧ್ಯವಿಲ್ಲದೇ ಭವಿಷ್ಯತ್ತಿನಲ್ಲಿ ಕಾದು ನೋಡಬೇಕಾಗಿದೆ.

ಏಕ ಸಂತಾನತ್ವದ ಪರ-ವಿರೋಧಗಳೇನೇ ಇರಲಿ, ಅಂಕಿ-ಅಂಶದಂತೆ, ಎಪ್ಪತ್ತರ ದಶಕದಲ್ಲಿದ್ದ ತಲಾ ದಂಪತಿಗಳ ಸರಾಸರಿ ೫.೯ ಮಕ್ಕಳಿಂದ ಪ್ರಸ್ತುತ ೧.೭ ಮಕ್ಕಳಿಗೆ ಇಳಿದಿರುವುದಂತೂ ವಾಸ್ತವ. ಏಕಸಂತಾನದ ಕಾಯಿದೆಯ ಪರಿಣಾಮವಾಗಿ ಪ್ರತೀ ವರ್ಷ ಸರಾಸರಿ ಮೂವತ್ತು ಲಕ್ಷಕ್ಕೂ ಮೀರಿದ ಅನಧಿಕೃತ ಸಂತಾನ ಎಲ್ಲೂ ದಾಖಲಾಗುತ್ತಿಲ್ಲಾ!

**ವೇಶ್ಯಾವಾಟಿಕೆ:**

ಅನಾದಿ ಕಾಲದ ಚೀನಿ ಸಮಾಜಲ್ಲಿ ವೇಶ್ಯಾವಾಟಿಕೆಯೆಂಬುದು ಮಧ್ಯಮ ಹಾಗು ಉನ್ನತ ವರ್ಗಕ್ಕೆ ಸೇರಿದ ನಾಗರೀಕರು ಸಾರ್ವತ್ರಿಕವಾಗಿ ಒಪ್ಪಿಕೊಂಡು ಪೋಷಿಸಿಕೊಂಡು ಬರುತ್ತಿದ್ದ ಬಹು ಮರ್ಯಾದೆಯುಳ್ಳ ಚಟುವಟಿಕೆಯೆಂದು ಲಭ್ಯವಿರುವ ದಾಖಲೆಯಂತೆ ಆರನೇ ಶತಮಾನದ ತಾಂಗ್ ರಾಜಮನೆತನದ ಆಳ್ವಿಕೆಯೆಡೆಗೆ ಬೆರಳು ಮಾಡಿ ತೋರಿಸುತ್ತದೆ. ಅವರ ಭಾಷೆಯಲ್ಲಿ "ಜಿ" ಎಂದು ಉಚ್ಚರಿಸಲ್ಪಡುತ್ತಿದ್ದ ಶಬ್ಧದ ಅರ್ಥ "ಕಲಾವಿದೆ" ಎಂದು. ಇಂಥಾ ಕಲಾವಿದರು ಸಂಗೀತ, ಗಾಯನ, ನೃತ್ಯಗಳಲ್ಲಿ ಪರಿಣಿತರಲ್ಲದೇ ಹಲವರು ಸ್ವತಃ ಕವಿಯತ್ರಿಯರೂ ಕೂಡ. ತಮ್ಮ ಬಳಿಗೆ ಅರಸಿ ಬರುತ್ತಿದ್ದ ಕಲಾಸಕ್ತರಿಗೆ ದೇಹ ಸಮರ್ಪಣೆಯೆಂಬುದು ಗೌಣವಾಗಿದ್ದು ತಮ್ಮ ಕಲಾ ಪ್ರದರ್ಶನ, ಸಮಾನ ಅಭಿರುಚಿಯವರಲ್ಲಿ ಸಲ್ಲಾಪದ ಮಾತುಕತೆಯೊಂದಿಗೆ ಸಮಯ ವ್ಯಯ ಮಾಡುವುದಲ್ಲದೇ ತಮ್ಮ ಕಲೆಯ ಪ್ರೌಢಿಮೆಯನ್ನು ಹಂಚಿಕೊಳ್ಳುವುದಾಗಿತ್ತು. ವಿಪರ್ಯಾಸವೆಂಬಂತೆ, ಅಂದಿನ ಪರಿಸ್ಥಿತಿಯಲ್ಲಿ ಸಾಮಾನ್ಯವಾಗಿ ಮಹಿಳೆಯರೆಲ್ಲರನ್ನು ಮನೆಯ ನಾಲ್ಕು ಗೋಡೆಗಳ ಮಧ್ಯೆ ಇರಿಸಿ ಗಂಡ, ಮನೆ, ಮಕ್ಕಳು ಮತ್ತು ಮನೆಗೆಲಸಕ್ಕಷ್ಟೇ ಮೀಸಲಾಗಿಟ್ಟು, ಆಕೆಯು ಮುಗ್ಧತೆಯ ಮುದ್ದೆಯಾಗಿರಲು ಬಯಸಿ, "ಕಲಾವಿದೆ"ಯರು ವ್ಯಕ್ತಪಡಿಸುತ್ತಿದ್ದ ನಡೆನುಡಿಗಳು ಮನೆಯಲ್ಲಿ ಅಲಭ್ಯವಾಗಿ "ಕಲಾವಿದೆ"ಯರ ಬಳಿಸಾರುತ್ತಿದ್ದರು.

ಇಂಥಾ "ಕಲಾವಿದೆ"ಯರನ್ನು, ಸಮಾಜದಿಂದ "ವ್ಯವಸ್ಥಿತ"ವಾಗಿ ಹೆಕ್ಕಿದ ಹೆಣ್ಣು ಮಕ್ಕಳಿಗೆ ಸಂಗೀತ, ಗಾಯನ, ನೃತ್ಯ ಮತ್ತು ಸಾಹಿತ್ಯದಲ್ಲಿ ಸಂಪೂರ್ಣ ತರಭೇತುಗೊಳಿಸಿ ಕಲಾಸಕ್ತರನ್ನು ಸಂತೈಸಲು ಸಿದ್ಧ ಮಾಡಲಾಗುತ್ತಿತ್ತು. ಒಂದು ಅಂಕಿ-ಅಂಶದಂತೆ, ತಾಂಗ್ ರಾಜಮನೆತನದ ಆಳ್ವಿಕೆಯ ಕಾಲದಲ್ಲಿ ರಚಿತವಾದ ಕವಿತೆಗಳೆನ್ನಲಾಗುವ ಸುಮಾರು ೪೯೦೦ ಕವಿತೆಗಳಲ್ಲಿ ೪೦೦೦ ಕವಿತೆಗಳು "ಕಲಾವಿದೆ"ಯರಿಗೆ ಸಂಬಂಧಪಟ್ಟವುಗಳೆಂದು ಮತ್ತು ೧೩೬ ಕವಿತೆಗಳನ್ನು ಸ್ವತಃ "ಕಲಾವಿದೆ"ಯರು ರಚಿಸಿದ್ದರೆನ್ನಲಾಗುತ್ತದೆ. ಅಂದು ಬೇಡಿಕೆಯಲ್ಲಿರುತ್ತಿದ್ದ "ಕಲಾವಿದೆ"ಯರ ಪ್ರಮುಖ ಆಕರ್ಷಣಾ ಅಂಶ, ದೈಹಿಕ ಸಿರಿಗಿಂತ ಬುದ್ಧಿವಂತಿಕೆ ಹಾಗೂ ಕಲೆಯ ನೈಪುಣ್ಯತೆ. ಮಧ್ಯಮ ಹಾಗೂ ಮೇಲ್ವರ್ಗದವರಿಗಷ್ಟೇ ಎಟುಕುವ ಕಲಾವಿದರು ಕ್ರಮೇಣ ಜನಸಾಮಾನ್ಯರ ಜೀವನದಲ್ಲೂ ಹಾಸುಹೊಕ್ಕಾಗಲು ಮುಖ್ಯ ಕಾರಣ, ಮೇಲ್ವರ್ಗದವರಿಂದ ತಮ್ಮ ಬೇಡಿಯ ಕುಸಿತ. ಜೀವನೋಪಾಯಕ್ಕೆ ಬೇರೆ ಮಾರ್ಗ ಅರಸಲು ಇಚ್ಚಿಸದೆ ಸಾಮಾನ್ಯರ ಕೈಗೆಟುಕಿ ಜೀವನ ಸಾಗಿಸುವಂತಾಯಿತು. ಕಲೆಯೇ ಮುಖ್ಯ ಗುರಿಯಾಗಿದ್ದ "ಕಲಾವಿದೆ"ಯರಿಂದ ಮುಂದೆ ಮಿಂಗ್ ಮತ್ತು ಚಿಂಗ್ ರಾಜವಂಶದ ಆಳ್ವಿಕೆಯಲ್ಲಿ ಕೇವಲ ದೈಹಿಕ ಸುಖವನ್ನು ಬಿಕರಿಸುವ ಮಟ್ಟಿಗೆ ಸೀಮಿತವಾಯಿತು.

ಹೀಗೆ ಬದಲಾವಣೆಯೊಂದಿಗೆ, ಹರಿದು ಬಂದ "ಕಲಾವಿದೆ"ಯರ ಚಟುವಟಿಕೆಗಳನ್ನು ೧೯೪೯ ರಲ್ಲಿ ಚೀನಿ ಗಣರಾಜ್ಯದ ಉದಯದೊಡನೆ ಆಡಳಿತ ಪಕ್ಷವು ವೇಶ್ಯಾವಾಟಿಕೆಯನ್ನು ಕಾನೂನು ಬಾಹಿರ ಎಂದು ಘೋಷಿಸಿ ದೇಶಾದ್ಯಂತ ಅನೇಕ ಸಂಘಟನೆ ಹಾಗೂ ಪ್ರಚಾರ ಕಾರ್ಯಕ್ರಮಗಳನ್ನು ಆಯೋಜಿಸುವ ಮೂಲಕ ನಾಗರೀಕರಿಗೆ ಮಾರ್ಗದರ್ಶನ ನೀಡಲಾಯಿತು. ಎಂಭತ್ತರ ದಶಕದ ತನಕ ಹದ್ದುಬಸ್ತಿನಲ್ಲಿದ್ದ(?) ವೇಶ್ಯಾವಾಟಿಕೆಯು, ಚೀನಾವು ತನ್ನನ್ನು ಹೊರಪ್ರಪಂಚಕ್ಕೆ ತೆರೆದುಕೊಂಡಂತೆ ಮುಂದೆ ಅದು ವ್ಯವಸ್ಥಿತವಾಗಿ ಚಿಗುರಿ ಹೆಮ್ಮರವಾಗಿ ಪ್ರಸ್ತುತ ಬೆಳೆದು ನಿಂತಿದೆ. ಈ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿರುವ ಬಹುತೇಕ ಮಹಿಳೆಯರು ತಮ್ಮ ಸ್ವಯಂ ಇಚ್ಛೆಯಿಂದ ಬಂದ ಕಾರಣ; ಅನಾಯಾಸವಾಗಿ ದೊರಕುವ ಹಣ, ಉನ್ನತ ಮಟ್ಟದ ಸಮಾಜದೊಂದಿಗೆ ಬೆರೆಯಲು ಸುಲಭದ ದಾರಿ ಹಾಗೂ ವೈಭವೋಪೇತ ಜೀವನಕ್ಕೆ ನಾಂದಿ ಹಾಡಲು ಸಲೀಸು ಎಂಬುದೇ. ಈ ಹಾದಿಯಲ್ಲಿ, ಅವಕಾಶಗಳ ಮಹಾಪೂರ ಹರಿಯಲು ಇವರ ಆಯ್ಕೆಗೆ ಇಂಬು ಕೊಡುವಂತೆ, ದೇಶಾದ್ಯಂತ ಹಲವಾರು ಪ್ರದೇಶಗಳಲ್ಲಿ, ಪ್ರವಾಸೋದ್ಯಮದ ಬೆಳವಣಿಗೆಗೆ ಸ್ಥಳೀಯ, ರಾಜ್ಯ ಹಾಗೂ ಕೇಂದ್ರ ಸರ್ಕಾರಗಳಿಂದ ಉತ್ತೇಜನವಿತ್ತು ಪೋಷಿಸುತ್ತಿರುವುದು ಮತ್ತೊಂದು ಗಮನಾರ್ಹವಾದ ಅಂಶ.

**ಚೀನಾದ ಆರಕ್ಷಕ ಇಲಾಖೆಯು ವೇಶ್ಯಾವಾಟಿಕೆಯ ಚಟುವಟಿಕೆಗಳನ್ನು ಅವರೋಹಣ ಗತಿಯಲ್ಲಿ ಏಳು ವಿಭಾಗಗಳಾಗಿ ವಿಂಗಡಿಸಿದೆ:**

೧ - ಅನಧಿಕೃತ ಪತ್ನಿತ್ವ - ದೀರ್ಘ ಕಾಲಾವಧಿಗೆ ಸಾಮಾನ್ಯವಾಗಿ ಅಧಿಕಾರಿಗಳು, ಶ್ರೀಮಂತರು, ವ್ಯವಹಾರಸ್ಥರು ಅಥವಾ ಪರದೇಶಿಗಳೊಂದಿಗೆ ಒಡನಾಟ.

೨ - ಅನಧಿಕೃತ ಪತ್ನಿತ್ವ - ಸಾಮಾನ್ಯವಾಗಿ ಪ್ರವಾಸ ಅಥವಾ ವಾರದ ಕೊನೆಯ ಸಂತೋಷ ಕೂಟಗಳಿಗೆ ಸೀಮಿತ

೩ - ಜೊತೆಗಾರ್ತಿ - ಊಟ, ಮದ್ಯಪಾನ, ಔತಣ ಕೂಟ, ಹಾಡು ಮತ್ತು ನೃತ್ಯಕ್ಕೆ ಸೀಮಿತ

೪ - ಚೆಲ್ಲಾಟದ ಹೆಣ್ಣು - ಹೋಟೆಲ್, ದೂರವಾಣಿ ಮತ್ತು ಅಂತರ್ಜಾಲದ ಮುಖೇನ ಪರಿಚಯವಾಗುವವರು

೫ - ಬೆಲೆವೆಣ್ಣುಗಳು - ಬ್ಯೂಟಿ ಪಾರ್ಲರ್ ಮತ್ತು ಮಸ್ಸಾಜ್ ಕೇಂದ್ರಗಳಲ್ಲಿ ಲಭ್ಯವಾಗುವವರು

೬ - ಬೀದಿಯ ಬೆಲೆವೆಣ್ಣುಗಳು - ಸಾಮಾನ್ಯವಾಗಿ ಇವರಷ್ಟೇ ಆರಕ್ಷಕರ ಅತಿಥಿಗಳು

೭ - ಕಟ್ಟಡಗಳ ನಿರ್ಮಾಣದ ಸ್ಥಳದಲ್ಲಿ ದೊರಕುವ ಬೆಲೆವೆಣ್ಣುಗಳು

**ಕಸೂತಿ ಕಲೆ:**

ಚೀನಿಯರು ಹೆಮ್ಮೆಯಿಂದ ಹೇಳಿಕೊಳ್ಳುವಂತೆ "ಕಸೂತಿಯು ಸಮಗ್ರ ಕಲೆಯ ಮುಕುಟದಲ್ಲಿನ ಮುತ್ತಿನ ಮಣಿ" ರೇಷ್ಮೆಯ ಅವಿಷ್ಕಾರವಾಗಿ, ಉಡುಗೆ ತೊಡುಗೆಗಳಲ್ಲಿ ಬಳಸಲು ಆರಂಭವಾದಾಗಲಿನಿಂದ ಕಸೂತಿಯು ನಿತ್ಯ ಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತು ಹೋಗಿದೆ. ಲಭ್ಯವಿರುವ ದಾಖಲೆಯ ಪ್ರಕಾರ ಕ್ರಿ.ಪೂ. ೧೬೦೦ ರಲ್ಲಿನ ಶಾಂಗ್ ರಾಜಮನೆತನದ ಆಳ್ವಿಕೆಯಲ್ಲಿ ಕಸೂತಿಯಿಂದ ಅಲಂಕರಿಸಿದ ವಸ್ತ್ರಗಳು ಸಮಾಜದಲ್ಲಿನ ವ್ಯಕ್ತಿಗಳ ಸ್ಥಾನ ಮಾನ ಹಾಗೂ ಪ್ರತಿಷ್ಠೆಯನ್ನು ನೇರವಾಗಿ ಬಿಂಬಿಸುತ್ತಿದ್ದವು. ಕ್ರಿ.ಪೂ. ೧೦೪೬ ರಲ್ಲಿ ಝೌ ರಾಜಮನೆತನದ ಆಳ್ವಿಕೆಯಲ್ಲಿ ವಸ್ತ್ರಗಳ ಮೇಲಿನ ಕಸೂತಿಯ ಚಿತ್ತಾರಗಳಲ್ಲಿ ಸೂರ್ಯ, ಚಂದ್ರ, ನಕ್ಷತ್ರ, ಬೆಟ್ಟ ಗುಡ್ಡಗಳು, ಪ್ರಾಣಿ-ಪಕ್ಷಿಗಳ ಚಿತ್ರಗಳಲ್ಲದೇ ಶುಭ ಸೂಚಿಸುವ ಪದಗಳನ್ನೂ ಸಹ ವ್ಯಕ್ತಿಗಳ ಪದವಿ ಮತ್ತು ಕಾಲಮಾನಕ್ಕನುಗುಣವಾಗಿ ಧರಿಸುವ ಪದ್ಧತಿಯನ್ನು ಅನುಸರಿಸಲಾಯಿತು. ಕ್ರಿ.ಶ.೨೨೦ರಲ್ಲಿ ಮೊತ್ತ ಮೊದಲ ಬಾರಿಗೆ ಚೀನಾದ ಭೂಪಟವನ್ನು ಸುನ್ ಚುವಾನ್ ಎಂಬ ರಾಜನ ಮಡದಿಯು ಕಸೂತಿಯಲ್ಲಿ ರಚಿಸಿದಳು. ಇದೇ ಅವಧಿಯಲ್ಲಿ ಬುದ್ಧನ ವಿಗ್ರಹ ಮತ್ತು ದೇವಸ್ಥಾನಗಳನ್ನು ಕಸೂತಿಯಿಂದ ಅಲಂಕೃತವಾದ ರೇಷ್ಮೆಯ ವಸ್ತ್ರಗಳಿಂದ ಸಿಂಗರಿಸಲಾರಂಭಿಸಿದರು. ಕ್ರಿ.ಶ. ೯೬೦ರಿಂದ ಕ್ರಿ.ಶ. ೧೨೬೦ ರ ಅವಧಿಯಲ್ಲಿ ಕಸೂತಿಯ ಕಲೆಯು ಉಚ್ಛ್ರಾಯ ಸ್ಥಿತಿಗೆ ತಲುಪಿತು. ಅಂದಿನ ಆಳ್ವಿಕೆಯನ್ನು ನಡೆಸುತ್ತಿದ್ದ ಸಾಂಗ್ ರಾಜಮನೆತನದವರು ತಮ್ಮ ಆಸ್ಥಾನದಲ್ಲಿ ಕಲೆಗೇ ಪ್ರತ್ಯೇಕವಾದ ಅಧಿಕಾರಿಗಳನ್ನು ನೇಮಿಸಿ ಕಸುತಿ ಕಲೆಯನ್ನು "ನಿತ್ಯ ಜೀವನಕ್ಕೆ ಕಲೆ" ಮತ್ತು "ಕಲೆಗೋಸ್ಕರ ಕಲೆ" ಎಂದು ಎರಡು ಭಾಗಗಳನ್ನಾಗಿಸಿತು. ಜೊತೆಗೆ ಕಸೂತಿಯ ಚಿತ್ತಾರಗಳನ್ನು ಪ್ರಕೃತಿ, ಮಾನವರು, ಪ್ರಾಣಿ-ಪಕ್ಷಿಗಳು ಮತ್ತು ಒಳಾವರಣದ ಚಿತ್ರಣವೆಂದು ವಿಂಗಡಿಸಿದರು. ಕ್ರಿ.ಶ. ೧೨೭೧ ರಲ್ಲಿ ಆಳ್ವಿಕೆ ನಡೆಸುತ್ತಿದ್ದ ಯೂವಾನ್ ರಾಜಮನೆತನದವರಿಂದ ಕಸೂತಿಕಲೆಯಲ್ಲಿ ಧಾರ್ಮಿಕತೆಗೆ ಒತ್ತು ಕೊಟ್ಟರು. ಕ್ರಿ.ಶ. ೧೬೮ರಲ್ಲಿದ್ದ ಮಿಂಗ್ ರಾಜಮನೆತನದಿಂದ ಕಸೂತಿಕಲೆಯಲ್ಲಿ ಪ್ರೇಮ, ಸಮೃದ್ಧಿ, ಐಕ್ಯತೆ, ಸಿರಿತನ, ಸ್ಥಾನಮಾನ ಹಾಗೂ ಅನಂತತೆಯ ಚಿತ್ರಣವನ್ನು ಬಿಂಬಿಸುವ ಶೈಲಿಯು ಪ್ರವರ್ಧಮಾನಕ್ಕೆ ಬಂತು.

ಕ್ರಿ.ಶ.೧೬೪೪ರ ತನಕ ಕಸೂತಿಯಲ್ಲಿ ಪ್ರಮುಖವಾಗಿ ರೇಷ್ಮೆಯ ದಾರವನ್ನು ಬಳಸಿ ದೇಶೀಯ ಚಿತ್ರಣಗಳನ್ನು ಮಾತ್ರ ಸಾಂಪ್ರದಾಯಿಕ ಪದ್ಧತಿಯಲ್ಲಿ ಬಿಂಬಿಸುತ್ತಿದ್ದ ಕಲೆಗೆ ಜಪಾನ್ ಹಾಗೂ ಪಾಶ್ಚಿಮಾತ್ಯರ ಸಂಪರ್ಕದಿಂದ ಚಿತ್ತಾರದಲ್ಲಿ ಗಮನಾರ್ಹ ಬದಲಾವಣೆ ಕಂಡಿತು. ಪ್ರಸ್ತುತ ದೇಶಾದ್ಯಂತ ತಮ್ಮ ಪ್ರಸಿದ್ಧಿ, ಬೇಡಿಕೆ ಮತ್ತು ಕಲಾನೈಪುಣ್ಯತೆಗೆ ಅನುಸಾರವಾಗಿ ನಾಲ್ಕು ಪ್ರಮುಖ ಬಗೆಯ ಕಸೂತಿಗಳಾದ ಪೂರ್ವದ ಸೂ (ಸೂಝೌ), ಮಧ್ಯ ಚೀನಾದ ಶೀಯಾಂಗ್, ದಕ್ಷಿಣದ ಯೂಯೆ (ಗುವಾಂಗ್ಡಾಂಗ್), ಮತ್ತು ಪಶ್ಚಿಮದ ಶೂ ಕಲೆಯು ಪ್ರಸಿದ್ಧಿಯಾಗಿವೆ.

**ಸೂ ಶೈಲಿಯ** ಕಸೂತಿಯು ಸರಳ ಚಿತ್ರಣಗಳನ್ನು ಮೆದುವಾದ ಬಣ್ಣಗಳ ಮಿಶ್ರಣದೊಂದಿಗೆ ಸಂಕೀರ್ಣ ಕಲಾನೈಪುಣ್ಯತೆಯಲ್ಲಿ ಮೆರೆಸಿ ಏಕಮುಖ ಹಾಗೂ ದ್ವಿಮುಖಗಳಲ್ಲಿ ಬಹು ವಿಶಾಲವಾದ ದೃಶ್ಯ ಕಾವ್ಯಗಳ ಆಯ್ಕೆಗೆ ಒತ್ತು ಕೊಟ್ಟು ಕಲೆಯ ಶ್ರೀಮಂತಿಕೆಯನ್ನು ಚಿತ್ರಿಸಿ ಅರಮನೆ ಮತ್ತು ಅಧಿಕಾರಿಗಳ ನಿವಾಸಗಳಲ್ಲಿ ಬಳಕೆಯಾಗುವಂತಾಗಿ ಮುಂದೆ ಪ್ರಪಂಚದಾದ್ಯಂತ ಅತೀ ಬೇಡಿಕೆಯನ್ನು ಹೊಂದಲು ಕಾರಣವಾಯಿತು.





**ಶೂ ಕಸೂತಿಯ** ಕಲೆಯು ಮೆದುವಾದ ಸ್ಯಾಟಿನ್ ಬಟ್ಟೆಯಿಂದ ಗಾಢವಾದ ಬಣ್ಣಗಳೊಂದಿಗೆ ಪ್ರಾಣಿ, ಪಕ್ಷಿ, ಮೀನು ಮತ್ತು ಮುಖ್ಯವಾಗಿ "ಪಾಂಡಾ"ದ ಹಾಗೂ ಸಮರ ದೃಶ್ಯಗಳನ್ನು ಸಾಮಾನ್ಯವಾಗಿ ತೆರೆಗಳು ಮತ್ತು ಹಾಸಿಗೆಯ ಹೊದಿಕೆಗಳಲ್ಲಿ ಚಿತ್ರಿಸುತ್ತಾರೆ.




**ಯೂಯೆ ಕಸೂತಿಯ** ಶೈಲಿಯಲ್ಲಿ ಗಮನಾರ್ಹವಾದ ಅಂಶವೆಂದರೆ ಈ ಕಲೆಯು ಆರಂಭಗೊಂಡದ್ದು ಗಂಡಸರಿಂದ! ರೇಷ್ಮೆ, ಹತ್ತಿ, ನವಿಲಿನ ಗರಿ ಹಾಗೂ ಕುದುರೆ ಬಾಲದ ಕೂದಲನ್ನು ಉಪಯೋಗಿಸಿ ಮುಖ್ಯವಾಗಿ ಹೂಗಳು, ಪಕ್ಷಿಗಳು, ಡ್ರ್ಯಾಗನ್ ಚಿತ್ರಗಳೊಂದಿಗೆ ಪ್ರಕೃತಿಯ ಚಿತ್ರಣವನ್ನು ಬಿಂಬಿಸುತ್ತಾರೆ. ಈ ಶೈಲಿಯ ವಿಶೇಷತೆಯಾದ ಚಿತ್ರಣದಲ್ಲಿ ಮೂರನೇ ಆಯಾಮವನ್ನು ತೋರಿಸಲು ಚಿನ್ನ, ಬೆಳ್ಳಿ ಹಾಗೂ ತಾಮ್ರದ ಎಳೆಗಳನ್ನು ಬಳಸಲಾಗುತ್ತದೆ. ಈ ಶೈಲಿಯ ಮತ್ತೊಂದು ವೈಶಿಷ್ಟ್ಯವೆಂದರೆ ಕಸೂತಿ ಮಾಡಲ್ಪಡುವ ಬಟ್ಟೆಯ ಬೃಹದಾಕಾರದ ವಿಸ್ತೀರ್ಣ. ಲಭ್ಯವಿರುವ, ಚೆಂಗ್ ರಾಜಮನೆತನದ ಆಳ್ವಿಕೆಯ ಅವಧಿಗೆ ಸಂಬಂಧಿಸಿದ್ದು ಎನ್ನಲಾದ ೨.೮ ಮೀಟರ್ ಉದ್ದ ಹಾಗೂ ೪.೨ ಮೀಟರ್ ಅಗಲವಾದ ಕೃತಿಯೇ ಇದಕ್ಕೆ ನಿದರ್ಶನ. ಪೋರ್ಚುಗೀಸರು ಈ ಕಲೆಗೆ ಮಾರು ಹೋಗಿ ಪ್ರಥಮ ಬಾರಿಗೆ ಹದಿನೈದನೇ ಶತಮಾನದಲ್ಲಿ ಸಾಗರದಾಚೆಗೆ ರಫ್ತಾಗಲು ಕಾರಣವಾಯಿತು. ನಂತರ ಯೂರೋಪಿನಾದ್ಯಂತ ಬೇಡಿಕೆ ಹೆಚ್ಚಿ ಅಲ್ಲಿಂದ ಬರುತ್ತಿದ್ದ ವಸ್ತ್ರಗಳ ಮೇಲೂ ಕಸೂತಿ ಮಾಡಿಕೊಡುವ ಕಾರ್ಯ ಆರಂಭವಾಯಿತು.





**ಷಿಯಾಂಗ್ (ಹೂನಾನ್) ಕಸೂತಿ** ಕಲೆಯು ರೇಷ್ಮೆ ಮತ್ತು ಸಾಟಿನ್‌ನಿಂದ ತಯಾರಿಸಲಾಗುತ್ತದೆ. ಈ ಕಲೆಯು ಸಾಮಾನ್ಯ ಜನಜೀವನದಲ್ಲಿ ಬಳಕೆಯಾಗುವ ವಸ್ತುಗಳ ಮೇಲೆ ಚಿತ್ರಿಸಲು ಒತ್ತು ಕೊಟ್ಟಿತ್ತು. ಉದಾಹರಣೆಗೆ ಹಣ ಮತ್ತು ತಂಬಾಕಿನ ಸಣ್ಣ ಕೈ ಚೀಲಗಳು. ಈ ಶೈಲಿಯ ಪ್ರತ್ಯೇಕತೆಯೆಂದರೆ ದ್ವಿಮುಖದಲ್ಲಿ ಸಿದ್ಧವಾಗುವ ಕಸೂತಿಯು ಎರಡು ಬದಿಗಳಲ್ಲಿ ವಿಭಿನ್ನ ಚಿತ್ರಣವನ್ನು ಬಿಂಬಿಸುವುದು!





**ಪ್ರವಾಸೋದ್ಯಮ:**

ಎಂಭತ್ತರ ದಶಕದ ತನಕ ಪ್ರವಾಸೋದ್ಯಮವನ್ನು ವಾಣಿಜ್ಯದ ದೃಷ್ಟಿಯಿಂದ ಗಮನಿಸದೇ ಇದ್ದ ಸರ್ಕಾರದ ಅಧಿಕಾರಿಗಳಿಗೆ ವಿದೇಶಿಯರ ಆಗಮನ ಮತ್ತು ನಿರ್ಗಮನದ ನಡುವೆ ಅವರು ಸಮಯವನ್ನು ಕಳೆಯುತ್ತಿದ್ದ ರೀತಿ ಹಾಗೂ ಭೇಟಿ ಮಾಡುತ್ತಿದ್ದ ಸ್ಥಳಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಸರ್ಕಾರಕ್ಕೆ ಆದಾಯವನ್ನು ನಿರಾಯಾಸವಾಗಿ ಕರುಣಿಸುವ ಮಾರ್ಗದ ಅರಿವಾಗಿ ದೇಶದುದ್ದಕ್ಕೂ ಇದ್ದ ದೇವಸ್ಥಾನಗಳು, ಬೆಟ್ಟ ಗುಡ್ಡಗಳು, ನದಿ ತೊರೆಗಳ ಜಾಗ, ಸಮುದ್ರ ತೀರಗಳು, ಅಳಿವಿನ ಅಂಚಿನಲ್ಲಿದ್ದ ಪುರಾತನ ಹಳ್ಳಿಗಳು, ಅಂದಿನ ಕಾಲದ ನಾಯಕರ ಗೃಹಗಳು, ಕೋಟೆ ಕೊತ್ತಲಗಳು ಹಾಗೂ ರಾಜಕೀಯ, ಸಾಂಸ್ಕೃತಿಕ, ಯುದ್ಧ ಮತ್ತು ಸಮಾಧಿಗಳಿಗೆ ಸಂಬಂಧಿಸಿದ ಸ್ಥಳಗಳನ್ನು ಗುರುತಿಸಿ ಅವುಗಳೆಲ್ಲವನ್ನು ಪ್ರವಾಸಿಗಳ ಮನಸ್ಸೆಳೆವ ನಿಟ್ಟಿನಲ್ಲಿ ಪ್ರವಾಸೋದ್ಯಮ ಇಲಾಖೆ, ಅರಣ್ಯ ಇಲಾಖೆ ಹಾಗೂ ಸಂಸ್ಕೃತಿ ಮತ್ತು ಪುರಾತತ್ವ ಇಲಾಖೆಯ ಜಂಟೀ ಆಶ್ರಯದಲ್ಲಿ ಸ್ಥಳೀಯ ಪ್ರವಾಸೋದ್ಯಮ ಅಭಿವೃದ್ಧಿಗೆ ಹೆಗಲು ಕೊಡುವ ಖಾಸಗೀ ಸಂಸ್ಥೆಗಳೊಂದಿಗೆ ಒಪ್ಪಂದದ ಮೇರೆಗೆ ಆ ಸ್ಥಳಗಳನ್ನು ವ್ಯವಸ್ಥಿತವಾಗಿ ಬೆಳವಣಿಗೆಗೆ ಅನುಕೂಲ ಮಾಡಿ ಬೃಹದಾಕಾರವಾಗಿ ಬೆಳೆಯುತ್ತಾ ಪ್ರಸ್ತುತ, ಸರ್ಕಾರಕ್ಕೆ ಗಮನಾರ್ಹವಾದ ಆದಾಯವನ್ನು ಖಾತರಿ ಮಾಡಿಕೊಂಡಾಗಿದೆ.

ಒಂದು ಕಾಲದಲ್ಲಿ ದೇವರನ್ನು ನೋಡಬೇಕೆಂದರೆ, ಯಾವುದೇ ಖರ್ಚಿಲ್ಲದೇ ದೇವಸ್ಥಾನಕ್ಕೆ ತೆರಳಿ ತಮ್ಮ ಅಳಲನ್ನು ದೇವರಲ್ಲಿ ತೋಡಿಕೊಂಡು ಅಭಯದ ಭಾವನೆಯನ್ನು ಹೊತ್ತು ನಿರಾಳವಾಗಿ ಹಿಂದಿರುಗುತ್ತಿದ್ದ ಭಕ್ತ ವೃಂದವು, ಪ್ರಸ್ತುತ ಕೈಯಲ್ಲಿ ಕಾಸಿಲ್ಲವೆಂದರೆ, ಧಾರ್ಮಿಕತೆಯ ನೆಲೆಗಟ್ಟನ್ನು ಸಂಪೂರ್ಣವಾಗಿ ತೊಡೆದುಕೊಂಡು ಬರೀ ವ್ಯವಹಾರ ಕೇಂದ್ರಗಳಾಗಿ ಪರಿವರ್ತನೆಗೊಂಡು, ಯಾವ ದೇವಸ್ಥಾನದ ಬಾಗಿಲುಗಳು ಭಕ್ತರ ಪಾಲಿಗೆ ತೆರೆಯುವುದೇ ಇಲ್ಲಾ. ದೇವಸ್ಥಾನದ ಅರ್ಚಕರು ಹಾಗೂ ಸಿಬ್ಬಂದಿಗಳಿಗೆ ಇಂತಿಷ್ಟು ಎಂದು ಸಂಬಳವಷ್ಟೇ ಕೈಗೆಟುಕಿ, ಅದರಿಂದ ಜೀವನೋಪಾಯಕ್ಕೆ ಕಷ್ಟಸಾಧ್ಯವಾಗಿ. ಬರುವ(?) ಭಕ್ತಾದಿಗಳ ಮೇಲೆ ತಮ್ಮ ಸಮ್ಮೋಹನಾಸ್ತ್ರವನ್ನು ಬೀರಿ ಹಣ ಗಳಿಕೆಯ ಮಾರ್ಗಕ್ಕೆ ನಾಂದಿ ಹಾಡಿದ್ದಾಗಿದೆ. ದೇಶದ ಕೆಲವು ಭಾಗಗಳಲ್ಲಿ, ಪುರಾತನ ದೇವಸ್ಥಾನ, ಮಸೀದಿ ಮತ್ತು ಚರ್ಚುಗಳನ್ನು ನಗರಾಭಿವೃದ್ಧಿಯ ನೆಪದಲ್ಲಿ ಆ ಸ್ಥಳದ ಪ್ರಾಚೀನತೆ ಹಾಗೂ ಧಾರ್ಮಿಕ ಮೌಲ್ಯದ ಕಡೆಗೆ ಗಮನ ಹರಿಸದೆ ಕೆಡವಿ, ಪಕ್ಕದಲ್ಲೆಲ್ಲೋ ಕಾಂಕ್ರೀಟ್‌ನ ಕಟ್ಟಡವನ್ನು ನಿರ್ಮಿಸಿ ದೇವಸ್ಥಾನವೆಂದು ಘೋಷಿಸಲಾಗುತ್ತದೆ. ಇನ್ನು ದೇವಸ್ಥಾನಗಳ ನಿರ್ವಹಣಾ ಕಾರ್ಯಗಳಿಗೆ ಬೇಕಾಗಿರುವ ಸಿಬ್ಬಂದಿಯನ್ನು, ಅರ್ಚಕರಿಂದ ಹಿಡಿದು ಕಸ ಗುಡಿಸುವವರನ್ನು ಒಳಗೊಂಡು ಯಾವುದೇ ಇತರ ಉದ್ಯೋಗಕ್ಕೆ ಸಂದರ್ಶನ ನಡೆಸಿ, ಯೋಗ್ಯತಾನುಸಾರ ಆಯ್ಕೆ ಮಾಡಿ, ತರಭೇತು ಕೊಟ್ಟು ಸೇವೆಯನ್ನು ಪಡೆಯುವಂತೆ, ದೇವಸ್ಥಾನಗಳಿಗೂ ಆರರಿಂದ ಅರವತ್ತು ವಯೋಮಾನದ ಗಂಡಸರು ಮತ್ತು ಹದಿನೆಂಟರಿಂದ ಅರವತ್ತು ವಯೋಮಾನದ ಹೆಂಗಳೆಯರನ್ನು, ಕನಿಷ್ಠ ಮೂರು ತಿಂಗಳಿನಿಂದ ಗರಿಷ್ಠ ಎರಡು ವರ್ಷಗಳ ಅವಧಿಗೆ ನೇಮಕಾತಿ ನಡೆಯುತ್ತದೆ. ಇತರ ಉದ್ಯೋಗಗಳ ಕಷ್ಟ-ಸುಖವನ್ನು ಕಂಡಿರುವ, ಕೇಳಿರುವ ಅನೇಕರು ಇಲ್ಲಾದರೆ, ಎರಡು ವರ್ಷಗಳು ಆರಾಮವಾದ ಜೀವನ ಅನುಭವಿಸಬಹುದೆಂಬ ಬಯಕೆಯಿಂದ ದಾಖಲಾಗಲು ಇಚ್ಛಿಸುತ್ತಾರೆ.

ಇನ್ನು, ಇತಿಹಾಸ ಪ್ರಸಿದ್ಧ ಸ್ಥಳಗಳೆನಿಸಿದ ಹಳ್ಳಿಗಳ ಸ್ಥಳಿಯರನ್ನು ಸಾರಾಸಗಟಾಗಿ ಎತ್ತಂಗಡಿ ಮಾಡಿಸಿ, ಇಡೀ ಹಳ್ಳಿಯನ್ನು ಮುದುಕಿಗೆ ಸಿಂಗಾರ ಮಾಡಿದಂತೆ ನವೀಕೃತಗೊಳಿಸಿ, ಮೊದಲೇ ನಿರ್ಧರಿಸಿದ್ದಂತೆ, ನಿಯಮಿತ ಕಾರ್ಯ ಚಟುವಟಿಕೆಗಳನ್ನು ಕೈಗೊಂಡು ಮುಂದುವರೆಯಲು ಶಕ್ತವಿದ್ದ ಸ್ಥಳೀಯರಿಗೆ ದುಬಾರಿ ಬಾಡಿಗೆಗೆ ನೆಲೆಸಲು ಅವಕಾಶ ಕಲ್ಪಿಸಿಕೊಡಲಾಗಿದೆ.
ಚಲನಚಿತ್ರ ಹಾಗೂ ದೂರದರ್ಶನದಲ್ಲಿನ ಕಥೆ, ನಾಟಕ ಮತ್ತು ಧಾರಾವಾಹಿಗಳಿಗೆಂದು ನಿರ್ಮಿಸಿದ್ದ ತಾತ್ಕಾಲಿಕ ರಂಗಸಜ್ಜಿಕೆಗಳನ್ನು, ಅದರ ಆಕರ್ಷಣೆಗೆ ಮನಸೋತು ಭೇಟಿ ನೀಡಲು ಉತ್ಸುಕತೆಯನ್ನು ತೋರಿದ ಪ್ರೇಕ್ಷಕರ ಮನೋಭಿಲಾಷೆಯನ್ನು ವಾಣಿಜ್ಯಾತ್ಮಕ ದೃಷ್ಟಿಯಲ್ಲಿ ಒರೆ ಹಚ್ಚಿ, ಇದ್ದ ತಾತ್ಕಾಲಿಕ ರಂಗಸಜ್ಜಿಕೆಗಳನ್ನು ಖಾಯಂಗೊಳಿಸಿ ಅನೇಕ ಮೋಜಿನ ಚಟುವಟಿಕೆಗಳನ್ನು ಆ ವಲಯಗಳಲ್ಲಿ ಅಳವಡಿಸಿ ಪ್ರವೇಶ ಶುಲ್ಕ ವಿಧಿಸಲು ಬೃಹದಾಕಾರದ ಬಾಗಿಲುಗಳನ್ನು ಅಳವಡಿಸಿದ್ದಾಗಿದೆ! ಮುಂದುವರೆದು ಪ್ರಪಂಚದಾದ್ಯಂತ ವಿವಿಧೆಡೆಗಳಲ್ಲಿರುವ ಪ್ರಖ್ಯಾತ ವಾಸ್ತುಶಿಲ್ಪ, ಕಟ್ಟಡ ಹಾಗೂ ಇತರ ಪ್ರಸಿದ್ಧ ತಾಣಗಳ ಪ್ರತಿಕೃತಿಗಳ ನಿರ್ಮಾಣ ನಿರಂತರವಾಗಿದೆ.

ಪ್ರಾಪಂಚಿಕ ಪ್ರವಾಸ ಸಂಸ್ಥೆಯು ಪ್ರಕಟಿಸಿರುವ ಸುತ್ತೋಲೆಯ ಅನುಸಾರ, ಪ್ರವಾಸಿಗರ ಸಂಖ್ಯೆ ಹಾಗೂ ಶೇಕಡವಾರು ಪ್ರವಾಸಿಗರು ಭೇಟಿ ನೀಡುವ ಪ್ರಪಂಚದ ಪ್ರಮುಖ ಹತ್ತು ಪ್ರವಾಸೀ ತಾಣಗಳೆಂದು ಗುರುತಿಸಿರುವ ದೇಶಗಳಲ್ಲಿ, ಚೀನಾವು ನಾಲ್ಕನೇ ಸ್ಥಾನವನ್ನು ಗಳಿಸಿದೆ. ಮೊದಲನೆಯ ಸ್ಥಾನ ಫ್ರಾನ್ಸ್, ಎರಡನೆಯದು ಅಮೇರಿಕಾ ಮತ್ತು ಮೂರನೆಯದು ಸ್ಪೇಯಿನ್ ದೇಶ. ಸಧ್ಯದಲ್ಲೇ ಚೀನಾವು ಪ್ರಥಮ ಸ್ಥಾನವನ್ನು ಗಳಿಸುವ ಎಲ್ಲಾ ಸಾಧ್ಯತೆಗಳಿವೆ ಎಂಬುದು ಎಲ್ಲರ ಅಂಬೋಣ!

**ವೃದ್ಧಾಪ್ಯ ಜೀವನ:**

ನಗರದಲ್ಲಿ, ಮಗ, ಸೊಸೆ ಅಥವ ಮಗಳು ಅಳಿಯ ಉದ್ಯೋಗಕ್ಕೆಂದು ಮನೆಯಿಂದ ಹೊರಗೆ ಹೋದರೆ, ಮೊಮ್ಮಕ್ಕಳ ಕಾಳಜಿ ಸಹಜವಾಗಿ ವೃದ್ಧರ ಮೇಲೇ... ಮೊಮ್ಮಕ್ಕಳನ್ನು ಶಾಲೆಗೆ ಕರೆದೋಯ್ಯುವುದು, ಶಾಲೆಯಿಂದ ಬಂದ ನಂತರ ಅವುಗಳ ಆರೈಕೆ, ಆಟ ಆಡಿಸುವುದು, ಅಡುಗೆಗೆ ಸಹಾಯ, ತರಕಾರಿ ದಿನಸಿ ತರುವುದು ಅಲ್ಲದೆ ಕೆಲ ವೃದ್ಧರು ತಾತ್ಕಾಲಿಕ ಉದ್ಯೋಗದಲ್ಲೂ ಕೂಡ ತಮ್ಮನ್ನು ತೊಡಗಿಸಿಕೊಂಡಿರುವರು. ಮತ್ತೆ ಕೆಲವರಂತೂ ಇಳೀ ವಯಸ್ಸಿನಲ್ಲೂ ತಮ್ಮ ಜೀವನೋಪಾಯಕ್ಕೆ ತಮ್ಮದೇ ಮಾರ್ಗವನ್ನು ಅರಸಬೇಕಾಗಿರುವುದು ವಾಸ್ತವ.

ಚೀನಾದಲ್ಲಿನ ವೃದ್ಧರ ಸಂಖ್ಯೆಯು ಕ್ರಮೇಣ ಏರುಗತಿಯಲ್ಲಿ ಸಾಗುತ್ತಿದ್ದು ಅರವತ್ತು ವಯೋಮಾನವನ್ನು ಮೀರಿದವರ ಸಂಖ್ಯೆ ಪ್ರಸ್ತುತ ಶೇಕಡಾ ಹದಿನಾಲ್ಕರಷ್ಟಿದ್ದು, ಪ್ರತೀ ವರ್ಷ ಈ ಸಂಖ್ಯೆಗೆ ಸರಾಸರಿ ಶೇಕಡಾ ಮೂರರಷ್ಟು ಸೇರ್ಪಡೆಯಾಗುತ್ತಿದೆ. ಇಂದಿನ ತ್ವರಿತ ಗತಿಯಲ್ಲಿ ಸಾಗಿತ್ತುರುವ ಒತ್ತಡದೊಂದಿಗಿನ ಜೀವನಶೈಲಿಗೆ ಸಿಲುಕಿದ ತರುಣ ಹಾಗು ಮಧ್ಯವಯಸ್ಕರ ಪರಿಸ್ಥಿತಿಯು ವೃದ್ಧರ ಕಡೆಗೆ ಅಷ್ಟೇನು ಮಹತ್ವದ ಕಾಳಜಿ ವಹಿಸಲಾಗದುದ್ದನ್ನು ಗಮನಿಸಿದ ಸರ್ಕಾರವು ೨೦೦೭ ರಿಂದೀಚೆಗೆ ವಯೋವೃದ್ಧರ ಕ್ಷೇಮಾಭಿವೃದ್ಧಿಗೆಂದು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಅವುಗಳಲ್ಲಿ ಮುಖ್ಯವಾದವುಗಳೆಂದರೆ, ವ್ಯಾಯಾಮಕ್ಕೆ ಅನುವು, ತಾಯ್‌ಜೀಚುವಾನ್ ಎಂಬ ಸಮರ ಕಲೆಯ ತರಭೇತಿ, ಹಾಡು ಮತ್ತು ನೃತ್ಯ ಮಾಡಲು ಸೌಲಭ್ಯ, ಕ್ಯಾಲೀಗ್ರಫೆ ಮತ್ತು ಚಿತ್ರಕಲೆಯ ತರಭೇತಿ, ಯಾಂಗ್ಗೀ ಎಂಬ ಜಾನಪದ ನೃತ್ಯದ ತರಭೇತಿ ಮುಂತಾದವುಗಳನ್ನು ದೇಶಾದ್ಯಂತ ವೃದ್ಧರು ನೆಲೆಸಿರುವ ನಗರ ಹಾಗೂ ಹಳ್ಳಿಗಳಲ್ಲಿನ ಎಲ್ಲಾ ವಲಯಗಳಲ್ಲಿ ಅವಕಾಶ ಕಲ್ಪಿಸಿದೆ.

ಹಾಗಾಗಿ, ಬೆಳಿಗ್ಗೆ ಮತ್ತು ಸಂಜೆಯ ವೇಳೆಗಳಲ್ಲಿ ಉದ್ಯಾನಗಳಲ್ಲಿ, ವಾಣಿಜ್ಯ ಸಮುಚ್ಚಯಗಳ ಮುಂದೆ ಅಥವಾ ಮುಖ್ಯ ಬೀದಿಗಳ ಬದಿಯಲ್ಲಿಯೋ ಸರ್ಕಾರಿ ಕಛೇರಿಗಳ ಮುಂದೆ ಲಘು ಸಂಗೀತದ ಹಿನ್ನೆಲೆಯಲ್ಲಿ ನೃತ್ಯ ಹಾಗೂ ಇತರ ಚಟುವಟಿಕೆಗಳು ನೆರವೇರುವುದರಿಂದ ವೃದ್ಧರಿಗೆ ಸಮಯ ಕಳೆಯುವ ಮಾರ್ಗವಾಗಿದೆ. ಮುಂದುವರೆದು, ವಿಭಿನ್ನ ವಲಯಕ್ಕೆ ಸೇರಿದ ಗುಂಪಿನೊಡನೆ ಪ್ರತೀ ಚಟುವಟಿಕೆಯಲ್ಲಿ ಸ್ಪರ್ಧೆಗಳನ್ನೂ ಸಹ ಆಯೋಜಿಸಲಾಗಿತ್ತದೆ. ಇನ್ನು, ಹಬ್ಬ ಅಥವಾ ರಜಾ ದಿನಗಳಂದು ಅವರ ಸಂಭ್ರಮದ ಪರಾಕಾಷ್ಠೆಗೆ ಮಿತಿಯೇ ಇಲ್ಲಾ.

ಜೊತೆಗೆ, ವಯೋವೃದ್ಧರಿಗೆಂದೇ ಬೈಸಿಕಲ್ ತುಳಿಯುವ ಶಿಬಿರ, ಬೇಸಿಗೆಯಲ್ಲಿನ ಈಜು ಶಿಬಿರ, ಪರ್ವತಾರೋಹಣ ಶಿಬಿರ, ಟೇಬಲ್ ಟೆನ್ನೀಸ್ ಶಿಬಿರ, ಛಾಯಾಚಿತ್ರ ಗ್ರಹಣ ಶಿಬಿರಗಳನ್ನು ಹಮ್ಮಿಕೊಂಡು ವೃದ್ಧರನ್ನು ಸಾಧ್ಯವಾದಷ್ಟು ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಮಾರ್ಗ ಕಲ್ಪಿಸಲಾಗಿದೆ. ಕೆಲವೆಡೆಯಂತೂ ವೃದ್ಧರ ನಡುವೆ ಇಸ್ಪೀಟ್ ಆಟ ಬಲು ಸಂಭ್ರಮದಿಂದ ನಡೆಯುತ್ತದೆ.

**ಸಾಂಪ್ರದಾಯಿಕ ವೈದ್ಯಕೀಯ ಪದ್ಧತಿ:**

ಚೀನಿಯರ ವೇದಾಂತದನ್ವಯ ಈ ಜಗದಲ್ಲಿನ ಸಕಲ ಚರಾಚರಗಳು ಪರಸ್ಪರ ಒಂದಕ್ಕೊಂದು ಸಂಬಂಧ ಹೊಂದಿದ್ದು ಕಾಲಕ್ಕನುಗುಣವಾಗಿ ಕ್ರಮೇಣ ಪರಿವರ್ತನೆಗೆ ಒಳಪಡುತ್ತವೆ. ಹಾಗಾಗಿ, ಪ್ರತಿಯೊಂದು ಜೀವ ಜಂತುಗಳು ಶಾಂತಿಯುತವಾದ ಪರಿಸ್ಥಿತಿಯನ್ನು ಹೊಂದಿ ಪ್ರಕೃತಿಯೊಂದಿಗೆ ಸಾಮರಸ್ಯವನ್ನು ಕಾಪಾಡಿಕೊಂಡು ಸಹಬಾಳ್ವೆ ನಡೆಸಬೇಕು. ಹೀಗೆ ನಂಬಿಕೊಂಡಿರುವ ಸಿದ್ಧಾಂತದಂತೆ, ಎಲ್ಲೇ ಏನೇ ಏರುಪೇರಾದರೂ ಪ್ರಕೃತಿಗೆ ಹಾಗೂ ಜೀವಜಂತುಗಳಿಗೆ ಮಾರಕ ಅನಿವಾರ್ಯ.

ಮಾನವ ಶರೀರವೂ ಸಹ ಒಂದು ಸೂಕ್ಷ್ಮ ಪ್ರಪಂಚವಿದ್ದಂತೆ. ಶರೀರವು ಪಂಚಭೂತಗಳಾದ ಮರ, ಬೆಂಕಿ, ಭೂಮಿ, ಖನಿಜ ಹಾಗೂ ನೀರಿನೊಡನೆ ಹಾಸುಹೊಕ್ಕಾಗಿ ಬೆರೆತಿರುವುದಲ್ಲದೇ ಅನವರತ ಅವುಗಳೊಂದಿಗೆ ಒಡನಾಟವಿರುವುದರೊಂದಿಗೆ ಎರಡು ಪ್ರಮುಖ ಶಕ್ತಿಗಳಾದ ಯಿನ್ (ಪ್ರಕೃತಿ) ಮತ್ತು ಯಾಂಗ್ (ಪುರುಷ) ಎಂಬ ಕ್ರಮವಾಗಿ 'ಏಕೀಕರಣ' ಮತ್ತು 'ಪ್ರತಿಭಟನೆ' ಸಿದ್ಧಾಂತಕ್ಕೆ ಬದ್ಧವಾದ ಪರಿಸ್ಥಿತಿಯನ್ನು ಎದುರಿಸುತ್ತಿರುತ್ತದೆ. ಎಲ್ಲಿಯವರೆಗೆ ಯಿನ್ (ಪ್ರಕೃತಿ) ಮತ್ತು ಯಾಂಗ್ (ಪುರುಷ) ಶಕ್ತಿಗಳು ಸಮತೋಲನದಲ್ಲಿ ಇರುವವೋ ಅಲ್ಲಿಯವರೆಗೆ ದೇಹವು ಆರೋಗ್ಯವಾಗಿ ಕಾರ್ಯ ನಿರ್ವಹಿಸುತ್ತದೆ. ಕಾರಣಾಂತರದಿಂದ, ಶಕ್ತಿಗಳ ಅಸಮತೋಲನವಾದಾಗ ದೇಹದಲ್ಲಿನ ರೋಗ ನಿರೋಧಕ ಅಂಶವು ಯಥೇಚ್ಚವಾಗಿ ವ್ಯಯಗೊಂಡು ಶರೀರದ ಸಾಮಾನ್ಯ ಸ್ಥಿತಿಯನ್ನು ಕಾಪಾಡಿಕೊಳ್ಳಲು ಅಸಮರ್ಥವಾಗಿ ಝರ್ಜರಿತವಾಗುವ ಸ್ಥಿತಿಯೇ ರೋಗಗ್ರಸ್ಥ ದೇಹ. ಇಂಥಾ ಪರಿಸ್ಥಿತಿಯನ್ನು ಎದುರಿಸಲು ದೇಹಕ್ಕೆ ಅವಶ್ಯಕವಾದ ಶಕ್ತಿಯನ್ನು ಒದಗಿಸಲು ಕಂಡುಕೊಂಡ ಉಪಾಯವೇ ಸಾಂಪ್ರದಾಯಿಕ ವೈದ್ಯಕೀಯ ಶಾಸ್ತ್ರ.

ಈ ಶಾಸ್ತ್ರದ ಪ್ರಕಾರ ದೇಹದಲ್ಲಿನ ಯಿನ್ (ಪ್ರಕೃತಿ) ಮತ್ತು ಯಾಂಗ್ (ಪುರುಷ) ಶಕ್ತಿಗಳ ಅಸಮತೋಲನತೆಗೆ ಕಾರಣ ಹುಡುಕುವಲ್ಲಿ ಬಳಸುವ ನಾಲ್ಕು ಕ್ರಮಗಳೆಂದರೆ ರೋಗಿಯ ಪೂರ್ವಾಪರ ವಿಚಾರಣೆ, ನಾಲಿಗೆ ಪರೀಕ್ಷೆ, ನಾಡಿ ಮಿಡಿತ ಮತ್ತು ಶಬ್ಧ ಶ್ರವಣದೊಂದಿಗೆ ವಾಸನೆ ಗ್ರಹಣ.

ಕಳೆದ ಎರಡು ಸಾವಿರ ವರ್ಷಗಳಿಂದ ಚೀನಿ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿರುವ ಸಾಂಪ್ರದಾಯಿಕ ವೈದ್ಯಕೀಯ ಪದ್ಧತಿಗೆ ಪೂರಕವೆಂಬಂತೆ ಬರಹ ರೂಪದಲ್ಲಿ ಚಿನ್ ರಾಜಮನೆತನದ ಆಳ್ವಿಕೆಗೂ ಮುನ್ನಾ ಅನುಸರಿಸುತ್ತಿದ್ದರು ಎನ್ನುವ ಶೆನ್ ನಾಂಗ್ ಎಂಬ ವೈದ್ಯನ ನಾರು ಬೇರು, ಗಿಡ ಗಂಟೆಗಳನ್ನು ಬಳಸಿ ತಯಾರಿಸುವ ೩೬೫ ವಿವಿಧ ಬಗೆಯ ಔಷಧಿಗಳ ವಿವರ ಲಭ್ಯವಿದೆ,



**ಪ್ರಸ್ತುತ:**

**ನಾಣ್ಯದ ಒಂದು ಮುಖ:**

ಕಳೆದ ಮೂವತ್ತೈದು ವರ್ಷಗಳ ಹಿಂದೆ ಆರಂಭಗೊಂಡು ಇಂದಿಗೂ ಸಾಗುತ್ತಿರುವ ಬದಲಾವಣೆಯ ಪ್ರವಾಹದಿಂದ ರಾಷ್ಟ್ರದ ಉದ್ದಗಲಕ್ಕೂ ಜನರ ಜೀವನ ಮಟ್ಟದಲ್ಲಿ ಗುರುತರವಾದ ಮುನ್ನಡೆಯಾಗಿದೆ. ದೇಶದ ಪಶ್ಚಿಮ ಭಾಗದಲ್ಲಿ ನೆಲೆಸಿರುವ ಶೇಕಡ ಹದಿನೈದರಷ್ಟು ನಾಗರೀಕರನ್ನು ಹೊರತುಪಡಿಸಿ, ಶೇಕಡ ಐವತ್ತಕ್ಕೂ ಮಿಗಿಲಾದ ನಾಗರೀಕರು ಬಡತನದ ರೇಖೆಯನ್ನು ದಾಟಿದ್ದಾಗಿದೆ. ಕೈಗಾರೀಕರಣದ ದೆಸೆಯಿಂದ ಶೇಕಡ ಇಪ್ಪತ್ತಾರಾರಷ್ಟು ನಾಗರೀಕರು ತಮ್ಮ ಹಳ್ಳಿ ಮತ್ತು ಗುಡ್ಡಗಾಡುಗಳನ್ನು ತೊರೆದು ಕಾರ್ಖಾನೆಯಲ್ಲಿ ನೌಕರಿ, ವ್ಯಾಪಾರ ಮತ್ತು ಇತರ ಸೇವಾವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ನಗರ ಪ್ರದೇಶವನ್ನು ತಲುಪಿದ್ದಾಗಿದೆ. ಸಾಮಾನ್ಯ ನಾಗರೀಕನ ಪ್ರಾಥಮಿಕ ಬೇಡಿಕೆಗಳಾದ ಆಹಾರ ಮತ್ತು ವಸ್ತ್ರಗಳ ಪೂರೈಕೆಯಲ್ಲಿ ಸಾಕಷ್ಟು ಸ್ಥಿರತೆ ನೆಲೆಗೊಂಡು ನಂತರದ ಬಯಕೆಗಳಾದ ವಿದ್ಯೆ, ಉದ್ಯೋಗ ಮತ್ತು ಸ್ವಂತ ನೆಲೆಯ ಕಡೆಗೆ ಕೈಚಾಚುವಂತಾಗಿದೆ. ಮುಂದುವರೆದು ಮನೊರಂಜನೆ, ಪ್ರವಾಸ ಹಾಗೂ ಉಳಿತಾಯಗಳೆಡೆಗೂ ಕಣ್ಣು ಹಾಯಿಸುವಂತಾಗಿದೆ. ಈ ಬೆಳವಣಿಗೆಗೆ ಸಾಕ್ಷಿಯಾಗಿ, ಪ್ರತೀ ವರ್ಷ ಶ್ರೀಮಂತರ ಮತ್ತು ಅತೀ ಶ್ರೀಮಂತರ ಪಟ್ಟಿಗೆ ಗಮನಾರ್ಹವಾದ ಸಂಖ್ಯೆಯ ಬೆಳವಣಿಗೆ ನಿರಂತರವಾಗಿ ಏರುತ್ತಿದೆ. ಹಳ್ಳಿ ಪ್ರದೇಶಗಳಿಂದ ಬಂದ ನಾಗರೀಕರಿಗೆ ಸೌಲಭ್ಯ ಕಲ್ಪಿಸುವ ನಿಟ್ಟಿನಲ್ಲಿ ಇದ್ದ ನಗರಗಳ ವಿಸ್ತರಣೆ ಹಾಗೂ ಹೊಸ ನಗರಗಳ ನಿರ್ಮಾಣ ಗಣನೀಯವಾಗಿ ಏರಿದೆ.

ಕೈಗಾರಿಕಾ ಕ್ರಾಂತಿಯನ್ನು ಅರಗಿಸಿಕೊಂಡು ರಫ್ತಿಗೆ ಉತ್ತೇಜನವೀಯಲು ಉತ್ತರದಿಂದ ಹಿಡಿದು ಪೂರ್ವದ ಮುಖೇನ ದಕ್ಷಿಣ ಭಾಗದವರೆಗೂ ಸಾರಿಗೆ ಸೌಕರ್ಯದಲ್ಲಿ ಮಹತ್ತರವಾದ ಪ್ರಗತಿಯಾಗಿದೆ.

**ನಾಣ್ಯದ ಇನ್ನೊಂದು ಮುಖ:**

ಬಂಡವಾಳಶಾಹಿಗಳು ಮತ್ತು ಕೈಗಾರಿಕೋದ್ಯಮಿಗಳ ತಲೆಯಲ್ಲಿ ಸತತವಾಗಿ ಕೊರೆಯುತ್ತಿರುವ ಒಂದೇ ಪ್ರಶ್ನೆ; ಮುಂದೇನು? ಕಾರಣ ಸರ್ಕಾರದ (ಅ)ಲಿಖಿತ ಕಾನೂನು ವ್ಯೆವಸ್ಥೆ! ಯಾರೂ ಊಹಿಸದಂತೆ ಇದ್ದಕ್ಕಿದ್ದಂತೆ ಆಗಾಗ್ಗೆ ಬದಲಾಗುವ ಕಾನೂನಿನ ನಿಯಮಾವಳಿಗಳು. ಯಾವುದೇ ಸರ್ಕಾರಿ ಅಧಿಕಾರಿಗಳು ನೀಡದ ದೃಢವಾದ ಮಾಹಿತಿ ಹಾಗೂ ಭರವಸೆಗಳಿಂದ ಮೂಡುತ್ತಿದ್ದ ಅಧೈರ್ಯ, ಅಸಮಧಾನ ಹಾಗೂ ಅತಂತ್ರ ಸ್ಥಿತಿಯನ್ನು ಎದುರಿಸಿಕೊಂಡು ಬಂದ ಇವರು ಪ್ರಸ್ತುತ ಸಮಗ್ರ ರಾಷ್ಟ್ರದ ಬೆಳವಣಿಗೆಯನ್ನು ಅವಲೋಕಿಸಿ, ಇದುವೇ ಬೆಳವಣಿಗೆಯ ಮಂಚೂಣಿ, ಮುಂದೇನಿದ್ದರೂ ಅಧೋಗತಿಯ ತಾಂಡವ ನೃತ್ಯ ಎಂಬ ಅನಿಸಿಕೆಯಿಂದ ಸಾವಕಾಶವಾಗಿ ತಮ್ಮ ಹೆಚ್ಚಿನ ಬಂಡವಾಳವನ್ನು ಇತರ ಬೆಳವಣಿಗೆಯ ಹಂತದಲ್ಲಿರುವ ದೇಶಗಳಲ್ಲಿ ಹೂಡಿ ಪ್ರಸ್ತುತ ದೇಶದಲ್ಲಿ ಕನಿಷ್ಠ ಬಂಡವಾಳ ಉಳಿಸಿ ಸುರಕ್ಷಿತ ಆಟ ಆಡುವಂತಾಗಿದೆ. ಪ್ರಪಂಚದ ಉತ್ಪಾದನ ವಲಯ ಎಂಬ ನವಿಲುಗರಿಯನ್ನು ತನ್ನ ಕಿರೀಟದಲ್ಲಿರಿಸಲು ಮಿತಿ ಮೀರಿದ ಕೈಗಾರೀಕರಣ ಮತ್ತು ನಗರೀಕರಣದ ದೆಸೆಯಿಂದ, ಇದ್ದ ಸಾಗುವಳಿ ಭೂಮಿ ಮತ್ತು ನೀರಿನ ಸೆಲೆಗಳನ್ನು ಕಬಳಿಸಿ ಆಗಲೇ ಅಪಾಯದ ಅಂಚಿನ ಕದವನ್ನು ತಟ್ಟಿದ್ದಾಗಿದೆ.

